# ಕೊಡಗು ಸಂಗಾತಿ

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಗೌಡ ಕನ್ನಡದ ಏಕೈಕ ಪಾಕ್ಷಿಕ ಪತ್ರಿಕೆ

K·R·N·N· 240 ಸಂಪುಟ : 1 ಸಂಚಿಕೆ : 12 ಸೆಪ್ಟೆಂಬರ್ 15 ರಿಂದ 30, 1997 ಪುಟಗಳು : 24 ರೂ. 5.



ದಸರ ಬಂತು ದಸರ, ಹುಮ್ಮಸದ ಸಂತೋಷದ ದಸರ

ಸುಪ್ರಸಿದ್ಧ ಮೈಸೂರು ಅರಮನೆ—ಮೇಲಿನ ಚಿತ್ರ

ಮೆರವಣಿಗೆಯಲ್ಲಿ ಅಂಬಾರಿಯೊಂದಿಗೆ ದ್ರೋಣ—ಕೆಳಗಿನ ಚಿತ್ರ

## ಓದುಗರ ಗಮನಕ್ಕೆ

ಮೈಸೂರಿನಿಂದ ಪ್ರಕಟವಾಗುತ್ತಿರುವ **"ಕೊಡಗು ಸಂಗಾತಿ"** ಪತ್ರಿಕೆಯು ಈಗಾಗಲೆ ರಾಜ್ಯಾದಾದ್ಯಂತ ಜಯಭೇರಿ ಬಾರಿಸುತ್ತಿರುವುದು ಸಂತೋಷದ ವಿಷಯ.

ಇದು ಕೊಡಗು ಮತ್ತು ದಕ್ಷಿಣ ಕನ್ನಡ ಹಾಗೂ ಇತರ ಭಾಗದ ಅರೆಭಾಷಿಕ ಜನಾಂಗದ ಮುಖವಾಣಿಯಾಗಿ ಹೊರಹೊಮ್ಮಿದ ಈ ಪತ್ರಿಕೆಯು ಈ ಜನಾಂಗದ ಏಕತೆ, ಐಕ್ಯತೆ, ಅರಿವು ಸಾಧಿಸುವ ನಿಟ್ಟಿನಲ್ಲಿ ಹೊರಹೊಮ್ಮಿದ ಪತ್ರಿಕೆಯಾದರೂ ಸಹ ದಕ್ಷಿಣ ಕನ್ನಡ ಜಿಲ್ಲೆಯ ಹಲವು ಜನರು ಈ ಪತ್ರಿಕೆಯು ಕೊಡಗಿಗೆ ಮಾತ್ರ ಸೀಮಿತವೆಂದು ತಿಳಿದಿರುವರೆಂದು ನಮ್ಮ ಗಮನಕ್ಕೆ ಬಂದಿರುತ್ತದೆ. ಆದರೆ ಇದು ಗೌಡ ಕನ್ನಡ (ಅರೆಭಾಷಿಕ) ಯುವ ಜನಾಂಗದ ಪ್ರತಿಭೆಯನ್ನು ಗುರುತಿಸಿ, ಯುವ ಶಕ್ತಿಯನ್ನು ಸಂಘಟಿಸಿ, ಏಕತೆಯೇ ದೇಶದ ಪ್ರಗತಿ ಎಂದು ಭಾವಿಸಿ ಈ ಮೇಲಿನ ಪತ್ರಿಕೆಯನ್ನು ಹೊರತಂದಿರುವುದು ಸತ್ಯ ಸಂಗತಿಯಾಗಿದೆ.

ಆದ್ದರಿಂದ ನಮ್ಮ ಗೌಡ ಬಾಂಧವರು ಕೊಡಗಿಗೆ ಮಾತ್ರ ಸೀಮಿತವೆಂದು ತಿಳಿಯದೆ ಎಲ್ಲಾ ಗೌಡ ಬಾಂಧವರಿಗೆ ಅನ್ವಯಿಸುವುದೆಂದು ತಿಳಿದು ಈ ನಮ್ಮ ಪತ್ರಿಕೆಯು ಬೆಳೆಯಲು ಸ್ಪಂಧಿಸಬೇಕಾಗಿ ವಿನಂತಿ.

—ಸಂ.

---

## ವಂದನೆಗಳು

**ಶ್ರೀ ಪಾಣತ್ತಲೆ ಬೋಪಯ್ಯ (ರಘು) ಬೆಂಗಳೂರು, ಇವರು ಜೀವಾವಧಿ ಸದಸ್ಯತನ ರೂ. 1000/– ಮತ್ತು ಜಾಹೀರಾತು ಕೊಟ್ಟು ಸಹಕರಿಸಿದ್ದಾರೆ.**

## ಹಾಗೂ

**ಶ್ರೀ ಕರ್ಣೇಯ್ಯನ ಎ. ವಿಶ್ವನಾಥ, ಅಭ್ಯತ್‌ಮಂಗಲ, ಇವರು ಸದಸ್ಯತನ ರೂ. 1000/– ಕೊಟ್ಟು ಪತ್ರಿಕೆ ಬೆಳೆಯಲು ಸಹಕರಿಸಿರುವರು. ಇವರಿಗೆ ಸಂಗಾತಿ ಬಳಗದ ವಂದನೆಗಳು.**

## ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :
**ಪಟ್ಟಡ ಪಿ. ಶೀಲಾಮಣಿ**

ಉಪ ಸಂಪಾದಕ :
**ಕಟ್ರತನ ಸಿ. ಜಯರಾಂ**

ಸಹ ಸಂಪಾದಕ :
**ಹುಲಿಮನೆ ರಮೇಶ್**

ವರದಿಗಾರ :
**ಪಟ್ಟಡ ಎಲ್. ಶಿವಕುಮಾರ್**

ಕಾರ್ಯ ನಿರ್ವಾಹಕಿ :
**ಕು|| ಗೀತಾ ಮೋಂಟಡ್ಕ**

ಪತ್ರಿಕಾ ಪ್ರತಿನಿಧಿ :
**ಕು|| ಧನು ಚೆರಿಯಮನೆ**

ಕಛೇರಿ ನಿರ್ವಹಣೆ :
**ಪಟ್ಟಡ ಪಿ. ದೀಪಕ್**
**ಹೊಸೊಕ್ಲು ಹರಿಣಿ ಬೆಳ್ಯಪ್ಪ**
**ಮುಞ್ಞಾಪುರ ಧರಣಿ ಗಣಪತಿ**

ಮುದ್ರಕರು :
**ಮುಞ್ಞಂಡ್ರ ಕೆ. ತಮ್ಮಯ್ಯ**
**ಆಶೀರ್ವಾದ್ ಪ್ರಿಂಟರ್ಸ್,**

ಗೌರವ ಸಂಪಾದಕ :
**ಪಟ್ಟಡ ಎಂ. ಪ್ರಭಾಕರ್**

ಚಂದಾ ಕಳುಹಿಸುವ ಮತ್ತು
ಜಾಹೀರಾತು ಪ್ರಸಾರ ಕಛೇರಿ :



**ಕೊಡಗು ಸಂಗಾತಿ**
ನಂ. 322, ಹಿನಕಲ್ ಗ್ರಾಮ ಮತ್ತು
ಅಂಚೆ [ಅರಳಿಕಟ್ಟೆ ಹತ್ತಿರ]
ಮೈಸೂರು–570 017.
ದೂರವಾಣಿ : 0821–516771


## ಒಳನೋಟ

ಪುಟಗಳು



### ಅರೆ ಭಾಷೆರ ವಿಭಾಗ



### ಚಂದಾ ವಿವರ

| | | |
|---|---|---|
| ಬಿಡಿ ಪ್ರತಿ | : | 5 ರೂ. |
| ಅರ್ಧ ವಾರ್ಷಿಕ | : | 60 ರೂ. |
| ವಾರ್ಷಿಕ ಚಂದಾ | : | 120 ರೂ. |

## ಸಂಪಾದಕೀಯ

### "ಕೊಡಗು ಸಂಗಾತಿಯ" ಒಂದು ನೋಟ

ಈ ಸ್ಪರ್ಧಾತ್ಮಕ ಯುಗದಲ್ಲಿ ಯಾವುದೇ ವ್ಯವಹಾರಗಳಿಗೆ ಉತ್ತಮ ಬಂಡವಾಳ, ಪರಿಣತಿ ಇದ್ದರೂ, ಬಂಡವಾಳ ಶಾಹಿಗಳು ಗೋತ ಹೊಡೆಯುವುದನ್ನು ಕಾಣಬಹುದು. ಈ ನಿಟ್ಟಿನಲ್ಲಿ ನಾವು "ಕೊಡಗು ಸಂಗಾತಿ" ಎಂಬ ಪತ್ರಿಕಾ ಮಾಧ್ಯಮವನ್ನು ನಿಮ್ಮ ಮುಂದಿಟ್ಟು ನಮ್ಮ-ನಿಮ್ಮ ಪರಿಚಯಗಳನ್ನು ಮೂಲೆ ಮೂಲೆಗಳಿಗೆ ಕೊಂಡೊಯ್ಯುತ್ತಾ ಆರು ತಿಂಗಳು (ಅರ್ಧ ವರ್ಷ) ಕಳೆದಿದೆ. ದುಸ್ಥರದಲ್ಲಿ ನಡೆಸಿದ ನಮ್ಮ 'ಸಂಗಾತಿ' ಬಳಗ ಇಂದು 12 ನೇ ಸಂಚಿಕೆಯನ್ನು ನಿಮ್ಮ ಕೈಯಲ್ಲಿಡುತ್ತಿದೆ. ಇನ್ನು ದೀರ್ಘ ಮಜಲುಗಳನ್ನು ಏರಬೇಕಿದೆ. ಇದರೊಂದಿಗೆ ನಿಮಗಳ ಟೀಕೆ-ಟಿಪ್ಪಣಿಗಳು ನಮಗೆ ಬಂದು ಸೇರುತ್ತಿದೆ. ಆದಷ್ಟು ಬೇಗ ಉತ್ತಮ ಬರವಣಿಗೆಗೆ ಆಧ್ಯತೆ ಕೊಡಲು ಪ್ರಯತ್ನಿಸುತ್ತಿದ್ದೇವೆ.

ಜಾಹೀರಾತು ಮಟ್ಟದಲ್ಲಿ ನೋಡಿದಾಗ ನಮಗೆ ಯಾವುದೇ ಉತ್ತಮ ಪ್ರೋತ್ಸಾಹ ಕಾಣುತ್ತಿಲ್ಲ. ಹೀಗಾಗಬಾರದು ಎಂಬುದು ನಮ್ಮ ಬೇಡಿಕೆ. ಹೀಗಿರುವಾಗ ಬಂಡವಾಳದ ಕೊರತೆ ಬಹಳವಾಗಿದೆ. ಅದರೊಂದಿಗೆ ನಮ್ಮ ಬಳಗದ ಕಾರ್ಯಕರ್ತರು ಯಾವುದೇ ಸಂಭಾವನೆ, ಫಲಾಪೇಕ್ಷೆ ನಿರೀಕ್ಷಿಸದೆ ಅರೆಕಾಲಿಕ ಉದ್ಯೋಗದೊಂದಿಗೆ ದುಡಿಯುತ್ತಿದ್ದಾರೆ. ಹಲವು ಅಡೆ-ತಡೆಗಳೊಂದಿಗೆ ನಿಮ್ಮ ಗಮನ ಸೆಳೆಯುವ ಮಹಾನ್ ಪ್ರಯತ್ನ ಮಾಡುವುದೆಂದರೆ ದೊಡ್ಡ ಸಾಹಸವೇ ಸರಿ. ಎಲ್ಲಕ್ಕಿಂತ ಹೆಚ್ಚಾಗಿ ಬಂಡವಾಳದ ಕೊರತೆ ಅತಿಯಾಗಿರುವುದು ನಮಗೆ ಬೇಸರವೆನಿಸುತ್ತಿದೆ.

ಪತ್ರಿಕೆ ಹೊರತರಬೇಕಾದರೆ ಎಷ್ಟೋ ರಾತ್ರಿ ನಿದ್ದೆಗೆಡಬೇಕಾಗುತ್ತದೆ. ಅದರೊಂದಿಗೆ ಯಾವುದೇ ತಪ್ಪುಗಳು ನುಸುಳದಂತೆ ಎಚ್ಚರವಹಿಸಬೇಕಾಗುತ್ತದೆ. ಲೇಖನಗಳ ಕೊರತೆಯಾದಾಗ ಲೇಖನಗಳನ್ನು ಹುಟ್ಟುಹಾಕುವುದು ಕಷ್ಟವೆನಿಸುತ್ತದೆ. ಬಿಚ್ಚು ನುಡಿಗಳು ಖಡ್ಗದಂತೆ ನಮ್ಮ ಮೇಲೆರಗಿದಾಗ ಅದಕ್ಕೆ ಪ್ರತಿ ಅಸ್ತ್ರ ಹೂಡಿ ಜಾಣತನ ತೋರಿಸಬೇಕಾಗುತ್ತದೆ. ಇವೆಲ್ಲದರ ಮಧ್ಯೆ ಮೌಲ್ಯವಿಲ್ಲದ ಬೆಲೆ ಏರಿಕೆಯಲ್ಲಿ 24 ಪುಟಗಳ "ಕೊಡಗು ಸಂಗಾತಿ" ನಿಮ್ಮ ಕೈಗಿಕ್ಕುವುದು ಸಾಮಾನ್ಯದ ಕೆಲಸವಲ್ಲ. ಇಲ್ಲಿ ನಾನು ಬರೆದಿರುವ ಬರವಣಿಗೆ ಉತ್ಪ್ರೇಕ್ಷೆ ಎನಿಸಿದರೆ ದಯವಿಟ್ಟು ಕ್ಷಮಿಸಿ. ನೀವೆಲ್ಲಾ ತಿಳಿದವರು ನಮ್ಮೊಂದಿಗೆ ಸಹಕರಿಸಿದರೆ ಅದು ನಮಗೆ ಬ್ರಹ್ಮಾಸ್ತ್ರವಾಗಬಹುದು.

ಸಂಪಾದಕರು.

## ಚಿನ್ನದ ಬೆಳೆ ಮೆಣಸು

ಮೆಣಸು ಸಾಂಬಾರ ಪದಾರ್ಥಗಳ ರಾಜ ಎಂಬ ಖ್ಯಾತಿಯನ್ನು ಹೊಂದಿದೆ.

ಭಾರತದ ಸುಮಾರು 1,16,000ಕ್ಕೂ ಹೆಚ್ಚು ಹೆಕ್ಟೇರುಗಳಲ್ಲಿ ಮೆಣಸನ್ನು ಬೆಳೆಯಲಾಗುತ್ತಿದ್ದು, ವಾರ್ಷಿಕ ಉತ್ಪಾದನೆ ಸುಮಾರು 65,000 ಟನ್ನುಗಳಷ್ಟಿವೆ. ಉತ್ತರ ಕನ್ನಡ, ದಕ್ಷಿಣ ಕನ್ನಡ, ಕೊಡಗು ಹಾಗೂ ಹಾಸನ ಜಿಲ್ಲೆಗಳಲ್ಲಿ ಮೆಣಸಿನ ಕೃಷಿ ಹೆಚ್ಚಾಗಿ ನಡೆಯುತ್ತಿದೆ.

ಮೆಣಸು 'ಪೈಪರೇಸಿಯ' ಕುಟುಂಬಕ್ಕೆ ಸೇರಿದ್ದು, 'ಪೈಪರ್ ನಿಗ್ರವ್' ಎಂಬ ಸಸ್ಯಶಾಸ್ತ್ರೀಯ ಹೆಸರನ್ನು ಹೊಂದಿದೆ. ತೇವಾಂಶದಿಂದ ಕೂಡಿದ ಉಷ್ಣ ವಲಯದ ಹವಾಗುಣ ಮೆಣಸಿಗೆ ಸೂಕ್ತ. ಅಧಿಕ ಮಳೆ, ತೇವಾಂಶ ಮತ್ತು ಬೆಚ್ಚನೆಯ ಹವೆಯಿದ್ದರೆ ಮೆಣಸು ಸೊಂಪಾಗಿ ಬೆಳೆಯುತ್ತದೆ.

ತೆಂಗು, ಅಡಿಕೆ ತೋಟಗಳಲ್ಲಿ ಹಾಗೂ ಕೊಡಗಿನ ಕಾಫಿ ತೋಟಗಳಲ್ಲಿ ನೆರಳು ನೀಡುವ ಮರಗಳಿಗೆ ಮೆಣಸನ್ನು ಹಬ್ಬಿಸುತ್ತಾರೆ.

ಹವಾಮಾನಕ್ಕೆ ಸೂಕ್ತವಾದ ತಳಿಗಳಲ್ಲಿ ಬಿಳಿ ಮಲ್ಲಿಗೆ ಸರ, ಕರಿ ಮುಂಡ, ಕರಿ ಮಲ್ಲಿಗೆ ಸರ, ಮೋಟಕೆರೆ, ದೊಡ್ಡ ಮಲ್ಲಿಗೆ ಸರ, ಕಲ್ಲುವಳ್ಳಿ ಮುಂತಾದವು ಪ್ರಮುಖವಾಗಿವೆ.

ನಾಟಿ ಮಾಡಿದ 4ನೆಯ ವರ್ಷದಿಂದ ಇಳುವರಿ ಅಧಿಕವಾಗುತ್ತಾ ಹೋಗುತ್ತದೆ. ಮಾರ್ಚ್-ಏಪ್ರಿಲ್‌ನಲ್ಲಿ ಎಲೆಗಳನ್ನು ತೆಗೆದ 4-5 ಗಿಣ್ಣುಗಳಿರುವ ಕಾಂಡಗಳನ್ನು ಕತ್ತರಿಸಿ ಪಾತಿಗಳಲ್ಲಿ ನೆಡಬೇಕು. ಈ ಪಾತಿಗಳಿಗೆ ಮೊದಲೇ ಕೊಟ್ಟಿಗೆ ಗೊಬ್ಬರ ಮಿಶ್ರ ಮಾಡಿರಬೇಕು. ಪಾತಿಯಿಂದ ತೆಗೆದ ಬಳ್ಳಿಗಳನ್ನು ನೆರಳು ನೀಡುವ ಮರಗಳಿಗೆ 60 ಸೆಂ.ಮೀ. ದೂರಕ್ಕೆ ಈಶಾನ್ಯ ದಿಕ್ಕಿನಲ್ಲಿ ಗುಂಡಿಗಳನ್ನು ತೆಗೆದು ಸಸಿಗಳನ್ನು ನೆಡಬೇಕು.

ಪ್ರತಿ ಮೆಣಸಿಗೆ ತಿಪ್ಪೆ ಮತ್ತು ರಸಾಯನಿಕ ಗೊಬ್ಬರ ಒದಗಿಸಬೇಕು. ಚಿಗುರು ತಿನ್ನುವ ಹುಳು, ಸ್ಕೇಲ್ಸ್, ಪೋಲೀಟಲ್ಸ್, ಥಿಪ್ಸ ಮುಂತಾದವು ಮೆಣಸಿನ ಬೆಳೆಗೆ ಹಾನಿಯುಂಟು ಮಾಡುತ್ತವೆ. ಇವನ್ನು ಹತೋಟಿಗೆ ತರಲು 10 ಲೀ. ನೀರಿಗೆ 10 ಮಿ. ಲೀ. ಮಿಥೈಲ್ ಪ್ಯಾರಾಥಿಯಾನ್ ಬೆರಸಿ ಬಳ್ಳಿಗೆ ಸಿಂಪಡಿಸಬೇಕು.

ಶೇ. 30ರಷ್ಟು ಹಣ್ಣಾದ ಅಂದರೆ ಸ್ವಲ್ಪ ಕೆಂಪು ಬಣ್ಣಕ್ಕೆ ತಿರುಗಿದಾಗ ಕೊಯ್ಲು ಮಾಡಬೇಕು. ಪಾಲಿಥೀನ್ ಹಾಳೆಯ ಮೇಲೆ ಹರಡಿ 8 ದಿನ ಬಿಸಿಲಿನಲ್ಲಿ ಒಣಗಿಸಬೇಕು. ಆಗ ಕಾಳಿನ ಮೇಲು ಚರ್ಮ ಸುಕ್ಕಾಗಿ, ಕಪ್ಪಾಗುತ್ತದೆ. ಇದೇ ಕಪ್ಪು ಮೆಣಸು.

(ಆಧಾರ)




# ಕುದುಕುಳಿ ತಮ್ಮಣ್ಣ ಸುಬ್ಬಯ್ಯ

ಕು... ...ಡಗು ಜಿಲ್ಲೆಯಲ್ಲಿ ಬಹು ವೇಗದಲ್ಲಿ ಬೆಳೆಯುತ್ತಿರುವ ಪೇಟೆ. ಈಗ ಅದು ಗ್ರಾಮ ಪಂಚಾಯಿತಿ, ಇಲ್ಲಿಯ ಒಂದು ಹೆಸರುವಾಸಿಯಾದ ಮುದ್ರಣಾಲಯ [Press] ಇದೆ. ಅದರ ಹೆಸರು "ಸೂರ್ಯ ಪವರ್ ಪ್ರೆಸ್ ಮತ್ತು ಜೆರಾಕ್ಸ್". ಶಾಲಾ ಮಕ್ಕಳಿಂದ ಹಿಡಿದು ವೃದ್ಧರ ಮಟ್ಟಿಗೆ ಬೇಕಾಗುವ ಶಾಲಾ ಸಾಮಗ್ರಿ, ಕೋರ್ಟು ಕಚೇರಿ ಸಾಮಗ್ರಿ, ಜೆರಾಕ್ಸ್, ಲೇಮಿನೇಶನ್‌ಗೆ ಹೆಸರಾದ ಕೇಂದ್ರ ಸೂರ್ಯ ಪ್ರೆಸ್.

ಇದರ ಮಾಲೀಕರು ಕುದುಕುಳಿ ತಮ್ಮಣ್ಣ, ಸೋಮಕ್ಕನವರ ಪುತ್ರ ಸುಬ್ಬಯ್ಯ. ನಾಲ್ಕು ಗಂಡು ಮಕ್ಕಳಲ್ಲಿ

**ಚೇಂದ್ರಿಮಾಡ ಜಿ. ಮುತ್ತಪ್ಪ**
ಕುಶಾಲನಗರ.

2ನೇಯವರು. ಇವರನ್ನು ಬಿ.ಜೆ.ಪಿ. ಸುಬ್ಬಯ್ಯರೆಂದೇ ಕರೆಯುವರು. ತಣ್ಣಿಮಾನಿ ಗ್ರಾಮದಲ್ಲಿ 1936, ಡಿಸೆಂಬರ್ 18ರಲ್ಲಿ ಜನ್ಮವೆತ್ತಿದರು. ಭಾಗಮಂಡಲ ಸರಕಾರಿ ಶಾಲೆಯಲ್ಲಿ ಏಳನೇ ತರಗತಿಯವರೆಗೆ, ಮನೆಯಿಂದ 2 ಕಿ.ಮೀ. ಕಾಲು ನಡಿಗೆಯಿಂದ ವಿದ್ಯಾಭ್ಯಾಸ ಮಾಡಿದರು. ತನ್ನ ಮುಂದಿನ ಜೀವನಕ್ಕಾಗಿ 1951ರಲ್ಲಿ ಮಡಿಕೇರಿಯಲ್ಲಿ ಒಂದು ಮುದ್ರಣಾಲಯದಲ್ಲಿ 7 ವರ್ಷಗಳ ಅನುಭವ.

1957ರಲ್ಲಿ ನಿಡುಬೆ ಕಾರ್ಯಪ್ಪನವರ ಮಗಳು ಸುಬ್ಬಮ್ಮಳನ್ನು ಲಗ್ನವಾದರು. ದಂಪತಿಗಳಿಗೆ ಒಂದು ಗಂಡು, ಐದು ಹೆಣ್ಣು ಮಕ್ಕಳು. 1958ರಲ್ಲಿ ಉದಯ ಪ್ರೆಸ್ ಮಡಿಕೇರಿ ಇದನ್ನು ಬಾಡಿಗೆಗೆ ಪಡೆದು ಸ್ವಂತವಾಗಿ ನಡೆಸಲಿಕ್ಕೆ ಮೊದಲಾದರು. ಆಗ ಅದರಲ್ಲಿ ಕೊಡಗಿನ ಹೆಸರಾಂತ "ಶಕ್ತಿ ಪತ್ರಿಕೆ", "ಹಿತವಾಣಿ" ಪತ್ರಿಕೆಗಳ ಮುದ್ರಣ ಶುರುಮಾಡಿದರು. ಅಷ್ಟಲ್ಲದೆ ಹಿತವಾಣಿ ಪತ್ರಿಕೆಯ ಪಾಲುದಾರರೂ ಆದರು.

1962ರಲ್ಲಿ ಮಡಿಕೇರಿಯಲ್ಲಿದ್ದ ಮುದ್ರಣಾಲಯವನ್ನು ಸೋಮವಾರಪೇಟೆಗೆ ವರ್ಗಾಯಿಸಿದರು. ಸೋಮವಾರಪೇಟೆಯ ಮುದ್ರ



**ಕುದುಕುಳಿ ತಮ್ಮಣ್ಣ ಸುಬ್ಬಯ್ಯ**

ಣಾಲಯವನ್ನು ತನ್ನ ತಮ್ಮ ರಾಮಪ್ಪನಿಗೆ ಕೊಟ್ಟು ಕುಶಾಲನಗರಕ್ಕೆ ಬಂದರು. ಇಲ್ಲಿಗೆ ಹತ್ತಿರವಿರುವ ಮೈಸೂರು ಜಿಲ್ಲೆಯ ಬೈಲುಕುಪ್ಪೆಯ ಮಂಚದೇವರ ಹಳ್ಳಿಯಲ್ಲಿ ಹೊಲ ಖರೀದಿಸಿ ನೆಲೆ ನಿಂತರು. ಕುಶಾಲನಗರದಲ್ಲಿ ಸೂರ್ಯ ಪವರ್ ಪ್ರೆಸ್ಸನ್ನು ಸ್ಥಾಪಿಸಿದರು. ಇಂದು ಅದನ್ನು ಜೆರಾಕ್ಸ್ ಮತ್ತು ಲೇಮಿನೇಶನ್ ಮಿಷನ್‌ನಿಂದ ವಿಸ್ತರಿಸಿದರು.

ಕೆ. ಟಿ. ಸುಬ್ಬಯ್ಯನವರು ಒಬ್ಬ ಕರ್ಮಯೋಗಿ. ಕರ್ಮಯೋಗಿ ಸದಾ ನಿರತರಾಗಿರುವರು. ಕಷ್ಟವನ್ನು ಸುಖವನ್ನಾಗಿ ಪರಿವರ್ತಿಸಬಲ್ಲ ವ್ಯಕ್ತಿ. ಸುಖವು ಸುಖವೇ ಆದರೆ ಕಷ್ಟದಲ್ಲಿ ಸುಖವನ್ನು ಪಡೆಯುವ ವ್ಯಕ್ತಿ ಸುಬ್ಬಯ್ಯನವರು. ಇವರೊಬ್ಬ ಆದರ್ಶ ವ್ಯವಸಾಯಗಾರ.

ಇವರು ನುರಿತ ರಾಜಕೀಯ ಕಾರ್ಯಕರ್ತರೂ ಹೌದು. 1958ರಲ್ಲಿ ರಾಷ್ಟ್ರೀಯ ಸ್ವಯಂ ಸೇವಕ ಸಂಘ R.S.S. ದಲ್ಲಿ ತಮ್ಮನ್ನು ತೊಡಗಿಸಿಕೊಂಡರು. 1977 ರಲ್ಲಿ ಜನತಾ ಪಾರ್ಟಿಯಲ್ಲಿ ಶಾಮೀಲಾಗಿ ಅಂದಿನ ಶಕ್ತಿಮಾನ್ R. ಗುಂಡುರಾಯರನ್ನು ಮಣ್ಣುಮುಕ್ಕಿಸಿ, ಜೀವಿಜಯರಿಗೆ ಗೆಲುವು ತರುವುದಲ್ಲಿ ಇವರ ಪಾತ್ರ ಮಹತ್ವದು. ಅಷ್ಟೇ ಅಲ್ಲ ಜೀವಿಜಯನವರು ಅರಣ್ಯ ಮಂತ್ರಿಯಾಗುವವರೆಗೆ ಶ್ರಮಿಸಿದರು.

1982ರಲ್ಲಿ ಪಾರ್ಟಿಗಳು ಒಡೆದು B.J.P. ಆಯಿತು. ಅವರ ದುಡಿತಕ್ಕೆ ಸಿಕ್ಕಿದ ಫಲ ಟೌನ್ ಪ್ರೆಸಿಡೆಂಟ್. ಜಿಲ್ಲೆಯ ಮುಖ್ಯ ಕಾರ್ಯಕ್ಕಾಗಿ ಮಂಡಳಿ ಸದಸ್ಯರಾಗಿ ಆರಿಸಲ್ಪಟ್ಟರು. 1992ರಲ್ಲಿ ಕುಶಾಲನಗರ ಪುರಸಭೆಯ ಸದಸ್ಯರಾದರು. 1993ರಿಂದ ಕೊಡಗಿನ ಮೂರು ತಾಲೋಕಿಗೆ ಇವರೊಬ್ಬ ಮುಖ್ಯ ಕಾರ್ಯನಿರ್ವಾಹಕರು.

ಇವರ ಪತ್ನಿ ಸರಸ್ವತಿಯವರೇನು ಕಡಿಮೆಯಿಲ್ಲ. ಗಂಡನನ್ನು ಪ್ರೆಸ್ಸ್‌ಗೆ ಕಳುಹಿಸಿ, ತಾನು ತನ್ನ ಮನೆ, ಹೊಲ, ತೋಟಗಳ ಮೇಲ್ವಿಚಾರಕರಾಗಿ ದುಡಿಯುವುದಲ್ಲದೆ ಸ್ವಂತ ಮುತುವರ್ಜಿಯಿಂದ ಹಾಲು ಉತ್ಪಾದಕರೂ ಹೌದು. ಅದರ ಫಲವಾಗಿ ಕೆ. ಟಿ. ಸುಬ್ಬಯ್ಯನವರು ಮಂಚದೇವನ ಹಳ್ಳಿ ಗ್ರಾಮೀಣ ಹಾಲು ಉತ್ಪಾದಕರ ಸಂಘದ ಅಧ್ಯಕ್ಷರಾದರು.

ದೇಶದ ಯುವಕರಿಗೆ ಅದರಲ್ಲೂ ನಮ್ಮ ಗೌಡ ಸಮಾಜ ಯುವಕರಿಗೆ ಅವರು ಈ ರೀತಿ ಹೇಳುವರು. "ತಂದೆ ತಾಯಿಗಳು ಮಕ್ಕಳನ್ನು ವಿದ್ಯೆಗೆ ಕಳುಹಿಸುವಾಗ,

[4ನೇ ಪುಟ ನೋಡಿ]

# ಪೂಮಾಣಿ—ಕಿನ್ನಿಮಾಣಿ (ಉಳ್ಳಾಕುಳು)

ಇತಿಹಾಸದಲ್ಲಿ ಕಾಣುವಂತೆ ಕನ್ನಡ ನಾಡಿನ ಪ್ರಥಮವಾಗಿ ಸ್ಥಾಪಿತವಾದ ಅರಸು ಮನೆತನದ ತಲಕಾಡಿನ "ಗಂಗ"ರೆಂದು ಕಂಡುಬರುತ್ತದೆ. ಈ ಗಂಗಡಿಕಾರ ಒಕ್ಕಲಿಗ ಮನೆತನಕ್ಕೆ ಸೇರಿದ ಯೋಧರು ಕನ್ನಡ ನಾಡಿನ ಉದ್ದಗಲದಲ್ಲಿ ನೆಲೆನಿಂತು ಆಗಿನ ಕಾಲದಲ್ಲಿ ಇಡೀ ಕರ್ನಾಟಕದಲ್ಲಿ ಗೌಡಾಳ್ವಿಕೆ ಇದ್ದಿತು. ಉತ್ತರ ಭಾರತದಿಂದ ಜೈನರ ಪ್ರಚಾರಕ್ಕೆ ಬಂದ ಸಿಂಹಾನಂದಿ ಎಂಬ ಜೈನ ಗುರುವು ತಲಕಾಡಿನ ರಾಜಕುಮಾರರಾದ ದಡಿಗ ಮತ್ತು ಮಾಧವ ಎಂಬ ಸಹೋದರರ ಸಹಾಯವನ್ನು ಪಡೆಯುತ್ತಾನೆ. ಅವರ ತಲೆಯ ಮೇಲೆ ಕರ್ಣಿಕಾರಿ ಹೂವಿನ ಕಿರೀಟವನ್ನು ತೊಡಿಸುತ್ತಾನೆ. ಇದರ ನೆನಪಿಗೆ ತುಳು ನಾಡಿನಲ್ಲಿ ಹೂ (ಪೂ) ಕಿರೀಟ ಧರಿಸಿದ ಮಾಣಿ (ಮಹನೀಯ) ಎಂಬುದಾಗಿ ಅಣ್ಣನನ್ನು, ಚಿಕ್ಕ (ತಿನ್ನಿ) ಮಹನೀಯ (ಮಾಣಿ) ಎಂಬುದಾಗ್ಗಿ ಗುರುತಿಸಲ್ಪಡುತ್ತಾರೆ. ಇವರು ದಂಡಯಾತ್ರೆಯಲ್ಲಿ ತುಳುನಾಡಿನಲ್ಲಿ ಜೈನ ಧರ್ಮ ಪ್ರಸಾರವಾದಂತೆ ಕಂಡುಬರುತ್ತದೆ.

ಶಿರಾಡಿಘಟ್ಟಕ್ಕೆ ಬಂದು ಕುಮಾರ ಪರ್ವತ ಹತ್ತಿ ದೃಷ್ಟಿ ಹಾಯಿಸಿದಾಗ ಸುಬ್ರಹ್ಮಣ್ಯ ದೇವಸ್ಥಾನದ ಕೊಡಿಮರ (ಧ್ವಜಸ್ತಂಭ) ದಲ್ಲಿ ಹಾರಾಡುತ್ತಿರುವ ಧ್ವಜ ಕಾಣುತ್ತದೆ. ಅದನ್ನು ಬಾಣ ಹೂಡಿ ತುಂಡರಿಸುತ್ತಾರೆ. ತುಂಡಾದ ಕುಕ್ಕೆ (ಸುಬ್ರಹ್ಮಣ್ಯದ ಕೊಡಿಮರ ಕುಕ್ಕುಂದೂರು ಎಂಬಲ್ಲಿ ಹೋಗಿ ಬೀಳುತ್ತದೆ. ಸುಬ್ರಹ್ಮಣ್ಯದಿಂದ 25 ಕಿ.ಮಿ. ದೂರದಲ್ಲಿ ಕುಕ್ಕುಂದೂರಿನಲ್ಲಿ ಉಳ್ಳಾಕುಳ ದೇವಸ್ಥಾನದಲ್ಲಿ ಈ ಕೊಡಿಮರ ಇದೆ ಎನ್ನಲಾಗುತ್ತದೆ.) ಇವರಿಗೂ—ಸುಬ್ರಹ್ಮಣ್ಯನಿಗೂ ಬಹಳ ಕಾಲದ ತನಕ ಯುದ್ಧವಾಗುತ್ತದೆ. ಕೊನೆಗೆ ಯುದ್ಧ ನಿಲ್ಲಿಸಲು ಶಿವ ಪಾರ್ವತಿ ಪ್ರತ್ಯಕ್ಷರಾಗಬೇಕಾಗುತ್ತದೆ. ಅವರು ಮಾಡಿದ ಒಡಂಬಡಿಕೆಯ ಪ್ರಕಾರ ಸುಬ್ರಹ್ಮಣ್ಯ ಜಾತ್ರೆಯಲ್ಲಿ ಕೊಡಿ ಏರಿಸುವ ಪದ್ಧತಿ ಇಲ್ಲ. ಬದಲಾಗಿ ಉಳ್ಳಾಕುಳು ಒಪ್ಪಿಸಿದ ಹದಿನಾರು ಕೈಯ ಕೊಪ್ಪರಿಗೆಯಲ್ಲಿ ಅನ್ನ ತಯಾರಿಸಿ ಅದರಲ್ಲಿ ಸೌಟು ಊರುವ ಪದ್ಧತಿ ನಡೆದು ಬರುತ್ತಿದೆ.

ಉಳ್ಳಾಕುಳು ದೈವಗಳ ಆರಾದನೆಯನ್ನು ಜೈನ, ಬಂಟ ಜನಾಂಗದವರೂ ಮಾಡುತ್ತಾರೆ. ಗೌಡ ಜನಾಂಗದವರು ಮನೆ ದೈವವಾಗಿ ಆರಾಧಿಸುತ್ತಾರೆ. ಕುಂಬಳೆ ಸೀಮೆಯ ಜಯಸಿಂಹ ಅರಸನಿಗೆ ಅವಮಾನಗೈದ ಕೊಡ್ಯಮೆ ಬಲ್ಲಾಳನನ್ನು ಉಳ್ಳಾಕುಳು ಶಿಕ್ಷಿಸುತ್ತಾರೆ. ದೇವಟಗೆ ಇವರ ಮೂಲಸ್ಥಾನವಾದರೆ—ಪೈಕ, ಮಾಣಿ ಬೆದ್ರಡ್ಕ, ಅಂಬೆಲಡ್ಕ ಮೊದಲಾದ ಕಡೆ ಇವರ ಪ್ರಾಚೀನ ಮಾಡ (ಭೂತಸ್ಥಾನ) ಗಳಿವೆ.

● ಎಸ್. ಎಸ್. ದೇವಿಪ್ರಸಾದ್

[ಆಧಾರ : ಅಮೃತ ಸೋಮೇಶ್ವರ ಅಭಿನಂದನ ಗ್ರಂಥ ಮತ್ತು ಪಾಡ್ದನಗಳು)

---

[3ನೇ ಪುಟದಿಂದ]

ಈ ವಿದ್ಯೆ ಸರಕಾರಿ ನೌಕರಿಗಾಗಿ ಎಂಬುದಾಗಿ ಕಲಿಯಬಾರದು. ವಿದ್ಯೆಯು ತನ್ನನ್ನು ತಾನು ಅರಿತು, ತನ್ನ ಕಾಲಿನ ಮೇಲೆ ತಾನು ನಿಲ್ಲುವಂತಾಗಬೇಕೆಂದು ಕಲಿಯಬೇಕು. ಮಕ್ಕಳಿಗೆ 20 ರಿಂದ 25 ವರ್ಷದೊಳಗೆ ಲಗ್ನ ಮಾಡುವುದು ಲೇಸು. ಹುಡುಗಿಯೇ ಆಗಲಿ, ಹುಡುಗನೇ ಆಗಲಿ ತನ್ನ ಸ್ವಂತ ಕಾಲಿನಲ್ಲಿ ನಿಲ್ಲಲು ಕಲಿಯಬೇಕು. ಇನ್ನೊಬ್ಬರ ಆಶ್ರಯ ಕೂಡದು. ಅಂತವರೇ ಸಮಾಜಕ್ಕೆ ಮಾರ್ಗದರ್ಶಕರು. ಹೀಗಾದರೆ ನಮ್ಮ ಸಮಾಜವೇ ಅಲ್ಲ ಇತರ ಜನಾಂಗದ ಸಮಾಜವೂ ಬೆಳೆಯುತ್ತದೆ. ನಮ್ಮ ಸಮಾಜ ಒಂದೇ ಬೆಳೆದರೆ ಸಾಲದು, ಇತರ ಸಮಾಜಗಳೂ ಬೆಳೆಯಬೇಕು. ಇದು ಇವರ ಅಂಬೋಣ. ಇವರ ಆದರ್ಶ ಜೀವನ ಯುವಕ, ಯುವತಿಯರಿಗೆ ಮಾರ್ಗದರ್ಶನವಾಗಲಿ. ನಮ್ಮ ಸಮಾಜ ಉನ್ನತಿ ಕಾಣುವಂತಾಗಲಿ.

---

## ಸಾಧಿಸುವ ಛಲವೊಂದಿದ್ದರೆ ಏನಾದರೂ ಸಾಧಿಸಬಹುದು

ದೇವರ ಧ್ಯಾನಿಸಿ ಸಿದ್ಧಿ ಪಡೆಯಲು
ಆಸೆಯ ಪಟ್ಟವನೊಬ್ಬನು.

ಅದಕ್ಕೆಂದೇ ಮನೆಯಲಿ ದೇವರ
ಧ್ಯಾನಿಸಲು ಶುರು ಮಾಡಿದನವ
ಅಲ್ಲಿ ನೋಡಿದರೆ ಹೆಂಡ್ತಿ—ಮಕ್ಕಳ
ಕಾಟವೆಂದು ತಿಳಿದನವ.

ಅದಕ್ಕೆಂದೇ ಕಾಡಿನಲಿ ದೇವರ
ಧ್ಯಾನಿಸಲು ಶುರು ಮಾಡಿದನವ
ಅಲ್ಲಿ ನೋಡಿದರೆ ಪ್ರಾಣಿ—ಪಕ್ಷಿಗಳ
ಕಾಟವೆಂದು ತಿಳಿದನವ.

ಅದಕ್ಕೆಂದೇ ನೀರಿನೊಳಗೆ ದೇವರ
ಧ್ಯಾನಿಸಲು ಶುರು ಮಾಡಿದನವ
ಅಲ್ಲಿ ನೋಡಿದರೆ ಏಡಿ—ಮೀನುಗಳ
ಕಾಟವೆಂದು ತಿಳಿದನವ.

ಕೊನೆಗೂ ಅವನಿಗಾಯ್ತು ಜ್ಞಾನೋದಯ
ಸಾಧಿಸುವ ಛಲವೊಂದಿದ್ದರೆ ಎಲ್ಲಿ,
ಏನನ್ನೂ ಬೇಕಾದರೂ ಸಾಧಿಸಬಹುದೆಂದ್ಮ
ಕೊನೆಗೂ ಮನೆಯಲ್ಲೇ ಕುಳಿತು ಧ್ಯಾನಿಸಿ
ದೇವರಲ್ಲಿ ಸಿದ್ಧಿ ಪಡೆದುಬಿಟ್ಟನವ !

● ಕೋಟಿಮನೆ ಮನೋಹರ,
ಮದೆನಾಡು.

## ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ
# 1837 ರ ಸ್ವಾತಂತ್ರ್ಯಸಂಗ್ರಾಮ

ಕ್ರಿ. ಶ. 1633 ರಿಂದ 1687ರ ವರೆಗೆ ಕೊಡಗನ್ನು ಆಳುತ್ತಿದ್ದ ಹಾಲೇರಿ ವಂಶದ ಮುದ್ದು ರಾಜರಿಗೆ ಗಂಡುಸಂತತಿ ಇಲ್ಲದಿರುವಾಗ ಅದೇ ಸಮಯದಲ್ಲಿ ಇಕ್ಕೇರಿ ಸಂಸ್ಥಾನವನ್ನು ಆಳುತ್ತಿದ್ದ ಶಿವಪ್ಪ ನಾಯಕರ ಉಪದೇಶದಂತೆ ಅವರು ಉಡುಗೊರೆಯಾಗಿ ಕೊಟ್ಟ ಚಿನ್ನದ ಕಾಲುದೀಪವನ್ನು ಹಸುವಿನ ತುಪ್ಪದಲ್ಲಿ ಎಡಬಿಡದೆ ಒಂದು ವರ್ಷದವರೆಗೆ ಉರಿಸಿದರೆ ದೇವರು ಗಂಡುಮಗುವನ್ನು ಕರುಣಿಸುವನೆಂಬ ಉಪದೇಶದ

**ಪೂಜಾರಿ ಪೊಣ್ಣಪ್ಪ,** ವಕೀಲರು
ಬೆಂಗಳೂರು

ಮೇರೆಗೆ ಮುದ್ದುರಾಜರು ಮಾಡಿದ ಮೇಲೆ ಪುತ್ರಸಂತಾನವಾಗಲು ಆ ಸುದ್ಧಿಯನ್ನು ಕೇಳಿ ಸಂತೋಷಪಟ್ಟು ತನ್ನ ಅಧೀನದಲ್ಲಿದ್ದ ಈಗಿನ ಸುಳ್ಯ ತಾಲ್ಲೂಕನ್ನು ಬೆಣ್ಣೆ ತುಪ್ಪಕ್ಕಾಗಿ ಬಿಟ್ಟುಕೊಟ್ಟರು. ಈ ರೀತಿ ಬಿಟ್ಟುಕೊಟ್ಟ ಪ್ರದೇಶವನ್ನು ಅಮೃತ ಸುಳ್ಯವೆಂಬುದಾಗಿ ಕರೆದು ನಂತರ ಅದು ಅಮರ ಸುಳ್ಯವಾಯಿತು. ಅದರ ನಂತರ ಈ ಪ್ರದೇಶದ ಸುತ್ತಮುತ್ತಲಿನ ಪ್ರದೇಶಗಳನ್ನು ಇಕ್ಕೇರಿ ನಾಯಕರಿಂದ ಕ್ರಯಕ್ಕೆ ಪಡೆದುಕೊಂಡಿದ್ದರಿಂದ ಈಗಿನ ಸುಳ್ಯದಿಂದ ಪಾಣೆಮಂಗಳೂರಿನವರೆಗೂ ಬೆಳ್ಳಾರೆ ಸುಬ್ರಮಣ್ಯದವರೆಗೂ ದಕ್ಷಿಣ ಕನ್ನಡದ ಪ್ರದೇಶಗಳು ಕೊಡಗು ಸಂಸ್ಥಾನಕ್ಕೆ ಸೇರಿದ್ದು. ಬ್ರಿಟೇಷರು 1834ರಲ್ಲಿ ಕೊಡಗನ್ನು ವಶಪಡಿಸಿಕೊಂಡ ನಂತರ ಈ ಪ್ರದೇಶಗಳನ್ನು ಮದ್ರಾಸು ಪ್ರಾಂತ್ಯಕ್ಕೆ ಸೇರಿಸಿ ದಕ್ಷಿಣ ಕನ್ನಡ ಜಿಲ್ಲೆ ಎಂದು ಕರೆದರು.

ಕೊಡಗಿನ ಹಾಲೇರಿ ವಂಶದ ರಾಜರುಗಳ ಪೈಕಿ, ದೊಡ್ಡವೀರರಾಜೇಂದ್ರ ಮತ್ತು ಲಿಂಗರಾಜೇಂದ್ರ ಒಡೆಯರು ಬ್ರಿಟೇಷರೊಡನೆ ಸ್ನೇಹದಿಂದ ಇದ್ದರು. ಬ್ರಿಟೇಷರೊಡನೆ ಸ್ನೇಹದಿಂದ ವರ್ತಿಸುವುದರಿಂದ ಅಪಾಯ ಕಟ್ಟಿಟ್ಟದ್ದು ಎಂಬ ಪ್ರಜ್ಞೆ ಅವರಿಗಿರಲಿಲ್ಲ. ಆದರೆ ಕೊಡಗಿನ ಕೊನೆಯ ರಾಜರಾದ ಚಿಕ್ಕವೀರರಾಜೇಂದ್ರ ಒಡೆಯರು ಬ್ರಿಟೇಷರೊಡನೆ ಶತ್ರುತ್ವದಿಂದ ಇರದಿದ್ದರೂ ಬ್ರಿಟೇಷರು ತನ್ನ ರಾಜ್ಯಭಾರದಲ್ಲಿ ಕೈ ಹಾಕುವುದನ್ನು ಸಹಿಸದಾದರು. ಆದರೂ ಬ್ರಿಟೀಷ್ ಅಧಿಕಾರಿಗಳು ತಲಚೇರಿಯಿಂದ ಕೊಡಗಿಗೆ ಬೇಟೆಗಾಗಿ ಬರುತ್ತಿದ್ದಾಗ ಅವರನ್ನು ಸೌಹಾರ್ದ ರೀತಿಯಲ್ಲಿ ಕಾಣುತ್ತಿದ್ದರು. ಹಾಗೆ ಬರುತ್ತಿದ್ದ ಬ್ರಿಟೀಷ್ ಅಧಿಕಾರಿಗಳು ಇಲ್ಲಿನ ವನಸಂಪತ್ತನ್ನೂ ಪ್ರಕೃತಿ ಸೌಂದರ್ಯವನ್ನೂ ನೋಡಿ ಮನಸೋತು ಕೊಡಗನ್ನು ಹೇಗಾದರೂ ಮಾಡಿ ಕಬಳಿಸಬೇಕೆಂದು ತಮ್ಮೊಳಗೆ ಯೋಜನೆ ಹಾಕಿಕೊಂಡಿದ್ದರು. ಹೀಗಿರುವ ಸಮಯದಲ್ಲಿ 1830ರಲ್ಲಿ ವೀರರಾಜೇಂದ್ರ ಒಡೆಯರಿಗೆ ಕಠಿಣವಾದ ಖಾಯಿಲೆಯಾಗಿದ್ದಾಗ ಶಸ್ತ್ರಚಿಕಿತ್ಸೆಯಾಗಬೇಕೆಂದು ವೈದ್ಯರ ಸಲಹೆಯಂತೆ ಬೊಂಬಾಯಿಯಿಂದ ಡಾ|| ಜಫರ್‌ಸನ್ ಎಂಬುವರನ್ನು ಕರೆಸಿಕೊಂಡರು ಅವರೊಡನೆ ಕ್ಯಾಪ್ಟನ್ ಹಿಲ್ ಎಂಬುವರು ರಾಜರಿಗೆ ಚಿಕಿತ್ಸೆ ಕೊಡಲು ಬಂದಿದ್ದರು. ಅವರುಗಳು 22 ದಿನಗಳವರೆಗೆ ಕೊಡಗಿನಲ್ಲಿ ಇದ್ದು ಅವರು ಚಿಕ್ಕವೀರ ರಾಜೇಂದ್ರರ ವಿಷಯವನ್ನು ಈ ರೀತಿ ಬಣ್ಣಿಸಿದ್ದಾರೆ :—

"ರಾಜನು ನಮ್ಮ ಮುಂದೆ ಕಸರತ್ತುಗಳನ್ನು ತೋರಿಸಿದ್ದರಿಂದ ಸೋಜಿಗವಾಯಿತು" ಆಗ ನಮಗೆ ಹಿಂದೂಸ್ಥಾನದಲ್ಲಿ ಶಿಖಂಡಿಗಳಿಂದ ಆವೃತರಾಗಿ, ರಾಣೀವಾಸದಲ್ಲಿ ತಮ್ಮ ಸಮಯವನ್ನು ಸುಖದಲ್ಲೇ ಕಳೆಯುವ ಅನೇಕ ದೇಶಿಯ ರಾಜರಿಗಿಂತ ಈ ರಾಜನು ಎಷ್ಟೋ ಮೇಲು ಅನ್ನಿಸಿತ್ತು. ಈ ರಾಜನಲ್ಲಿ ಕಂಡ ಒಂದು ಮೆಚ್ಚಿಗೆಯ ಸಂಗತಿ ಎಂದರೆ, ಈ ರಾಜನು ಅವಶ್ಯಬಿದ್ದರೆ ಶಸ್ತ್ರ ಸಜ್ಜಿತರಾದ 25,000 ಜನರನ್ನು ಕೂಡಿಸಬಲ್ಲವನಾಗಿದ್ದನು. ಆದರೂ ಎಲ್ಲಾ ರೈತರೊಡನೆ ಮಿಳಿತನಾಗಿ ಅವರ ಕಷ್ಟಗಳನ್ನು ವಿಚಾರಿಸುತ್ತಿದ್ದನು. ಅವರ ಮೇಲೆ ತುಂಬಾ ದಯೆಯಿಟ್ಟು ಸಹಾನುಭೂತಿಯನ್ನು ತೋರಿಸುತ್ತಿದ್ದನು. ಇದರಿಂದಾಗಿ ಅವನ ಪ್ರಜೆಗಳು ರಾಜನು ರಾಜ್ಯದ ಒಳಭಾಗದಲ್ಲಿ ಸಂಚರಿಸುತ್ತಿದ್ದಾಗ ಯಾವ್ಯಾವ ವಿಧದಲ್ಲಿ ಅವನಿಗೆ ಗೌರವ ಮತ್ತು ಪ್ರೀತಿಗಳನ್ನು ಸಲ್ಲಿಸಬಹುದೋ ಆ ವಿಧದಲ್ಲಿ ಸಲ್ಲಿಸುತ್ತಿದ್ದರು. ನಾನೂ ನನ್ನ ಗೆಳೆಯರು ಇದ್ದಾಗ ಬಹಳ ಅಪರೂಪವಾಗಿದ್ದ ಇಂಗ್ಲೀಷ್ ಗೃಹಸ್ಥರಾದವರು ನಮ್ಮನ್ನು ನೋಡಲು ಗಂಡಸರೂ, ಹೆಂಗಸರೂ, ಮಕ್ಕಳೂ ಕುತೂಹಲಪಟ್ಟು ನಮ್ಮ ಸುತ್ತಲು ದೊಡ್ಡ ಸಂಖ್ಯೆಯಲ್ಲಿ ಸೇರುತ್ತಿದ್ದರು. ಈ ರಾಜನನ್ನು ಪ್ರಜೆಗಳು ಬಹಳ ಪ್ರೀತಿಯಿಂದ ಕಾಣುತ್ತಿದ್ದರೆಂದು ನಾನು ಹೇಳುವುದಕ್ಕೆ ಬಹಳ ಸಂತೋಷ ಪಡುತ್ತೇನೆ. ಯಾಕೆಂದರೆ ಇತ್ತೀಚಿಗೆ ತಮ್ಮ ದುರುದ್ದೇಶಗಳನ್ನು ಸಾಧಿಸುವುದಕ್ಕೋಸ್ಕರ ಕೆಲವರು ರಾಜನು ಬಹಳ ಕೆಟ್ಟವನೆಂದು ವರ್ತಮಾನವನ್ನು ಪ್ರಯತ್ನಪೂರ್ವಕವಾಗಿ ಪ್ರಸಾರಮಾಡಿ ರಾಜನ ಹೆಸರನ್ನು ಕೆಡಿಸಿರುವರು, ಎಂಬುದಾಗಿ ನನಗೆ ಗೊತ್ತಾಗಿದೆ.

(ಮುಂದುವರೆದಿದೆ)

# ನಿದ್ದೆ ಬಗ್ಗೆ ನಿಮಗೆಷ್ಟು ಗೊತ್ತು ?

"ಚಿಂತೆ ಇಲ್ಲದವನಿಗೆ ಸಂತೆಯಲ್ಲಿ ನಿದ್ದೆ ಬಂತು" ಎಂಬ ನಾಣ್ನುಡಿ ನಮ್ಮಲ್ಲಿ ಪ್ರಚಲಿತವಲ್ಲಿದೆ. ನಿದ್ದೆ ಬಗ್ಗೆ ವಿಜ್ಞಾನಿಗಳು ಬಹಳ ತಲೆ ಕೆಡಿಸಿಕೊಂಡಿದ್ದಾರೆ. ಮಾನವನ ಅಗತ್ಯ ಕ್ರಿಯೆಗಳಲ್ಲಿ ನಿದ್ದೆಯು ಒಂದು. ನಮ್ಮಲ್ಲಿ ಅನೇಕರು ನಿದ್ದೆ ಬರದೆ ನರಳುತ್ತಿದ್ದರೆ, ಕೆಲವರು ನಿದ್ದೆ ಹೆಚ್ಚಾಗಿ ಪರಿತಪಿಸುವುದು ಸಾಮಾನ್ಯ. ನಿದ್ದೆ ಬಂದಾಗ ಉಂಟಾಗುವ ದೈಹಿಕ ಮತ್ತು ಮಾನಸಿಕ ಬದಲಾವಣೆಗಳು, ನಿದ್ದೆಗೆ ಸಂಬಂಧಪಟ್ಟ ರೋಗಗಳು ಮತ್ತು ಅವುಗಳ ಪರಿಹಾರ ಇವುಗಳ ಬಗ್ಗೆ ಸಂಶೋಧನೆಗಳು ನಡೆಯುತ್ತಲೇ ಇದ್ದು, ಬೇರೆ ಬೇರೆ ತರ್ಕಗಳು ಹೊರಬರುತ್ತಿವೆ.

ನಾವು ಬೆಳಗಿನ ಹೊತ್ತು ಕೆಲಸದಲ್ಲಿದ್ದಾಗ ಮಾಂಸಖಂಡಗಳು ಬಿಗಿಗೊಳ್ಳುತ್ತವೆ. ಅಥವಾ ಒತ್ತಡಕ್ಕೆ ಗುರಿಯಾಗುತ್ತವೆ. ಮಾಂಸ ಖಂಡಗಳಲ್ಲಿನ ಕೋಶಗಳು ಸಹಜ ಸ್ಥಿತಿಗೆ ಬರಲು ನಾವು

**ಹುಲಿಮನೆ ರಮೇಶ್,** ಮೈಸೂರು.

ನಿದ್ದೆ ಮಾಡಬೇಕಾಗುತ್ತದೆ. ಇತ್ತೀಚಿನ ಸಂಶೋಧನೆಯೊಂದರ ಪ್ರಕಾರ ನಮ್ಮ ನಿದ್ರಾವಸ್ಥೆಗೆ ನಮ್ಮ ಮಿದುಳಿನ 'ಹೈಪೊಥಲಾಮಸ್' ಪ್ರದೇಶದಲ್ಲಿರುವ ನರಕೋಶಗಳು ಅಥವಾ 'ನ್ಯೂರಾನ್'ಗಳು ಕಾರಣವೆಂದು ತಿಳಿದುಬಂದಿದೆ.

ನಾವು ಚೇತನದಿಂದ ಅಚೇತನ ಸ್ಥಿತಿಗೆ, ಅಂದರೆ ನಿದ್ದೆಯಿಂದ ಎಚ್ಚರ ಸ್ಥಿತಿಗೆ ಅಥವಾ ಎಚ್ಚರ ಸ್ಥಿತಿಯಿಂದ ನಿದ್ರಾವಸ್ಥೆಗೆ ತೊಡಗಿದಾಗ ನಮ್ಮ ಮಿದುಳಿನ 'ಕಾರ್ಟೆಕ್ಸ್' ಎಂಬ ಭಾಗದಲ್ಲಿ ಅಲೆಗಳ ಚಲನೆ ಉಂಟಾಗುತ್ತದೆ.

ನಿದ್ದೆಗೆ ಸಂಬಂಧಪಟ್ಟಂತೆ ಬರುವ ಬಹು ಮುಖ್ಯ ರೋಗವೆಂದರೆ ಇನ್ಸೋಮ್ನಿಯಾ (Insomnia). ಈ ರೋಗ ಇರುವ ವ್ಯಕ್ತಿ ಇದ್ದಕ್ಕಿದ್ದ ಹಾಗೆ ನಿದ್ದೆ ಪಡೆಯುತ್ತಾನೆ. ಇಂತಹ ವ್ಯಕ್ತಿಗಳಿಗೆ ತೂಕಡಿಕೆ ಬರುವುದಿಲ್ಲ. ಇವರು ನೇರವಾಗಿ ಗಾಢ ನಿದ್ದೆಯಲ್ಲಿ ತೊಡಗುತ್ತಾರೆ. ಇವರು ಏನೇ ಕೆಲಸದಲ್ಲಿ ತೊಡಗಿರಲಿ ಅಥವಾ ಎಲ್ಲೇ ಇರಲಿ, ನಿದ್ದೆ ಅವರನ್ನು ಆವರಿಸುತ್ತದೆ. ನಿದ್ದೆಯಿಂದ ಎಚ್ಚರವಾದ ಬಳಿಕ, ಅವರಿಗೆ ತಾವು ನಿದ್ದೆಯಲ್ಲಿ ತೊಡಗಿದ್ದೆವು ಎಂಬ ಅರಿವು ಕೂಡ ಇರುವುದಿಲ್ಲ. ಕೆಲವು ಅನಾಹುತಗಳಿಗೆ ಈ ರೋಗವೇ ಕಾರಣವೆಂದು ಹೇಳಲಾಗಿದೆ. ಕೆಲವರು ನಿದ್ದೆ ಬರದೆ ನಿದ್ದೆ ಗುಳಿಗೆಗಳಿಗೆ ಶರಣಾಗುತ್ತಾರೆ. ಆದರೆ ಈ ಗುಳಿಗೆಗಳು ಕಾಲಕ್ರಮೇಣ ವ್ಯಕ್ತಿಯನ್ನು ನಿಶ್ಶಕ್ತಿಗೊಳಿಸುತ್ತವೆ. ಮತ್ತೆ ಕೆಲವರು ನಿದ್ದೆಯಲ್ಲಿದ್ದಾಗ ಹಾಸಿಗೆಯಿಂದ ಎದ್ದು ಮನೆಯಲ್ಲೇ ಓಡಾಡಬಹುದು. ಅಥವಾ ಬಾಗಿಲು ತೆರೆದುಕೊಂಡು ಹೊರಗೆ ಹೋಗಬಹುದು. ಇದನ್ನು 'ಸ್ಲೀಪ್ ವಾಕಿಂಗ್' ತೊಂದರೆ ಎಂದು ಹೇಳುತ್ತಾರೆ.

ಸುಖ ನಿದ್ರೆ ಹೆಚ್ಚಾಗಿ ಲಭಿಸಬೇಕಾದರೆ......

- ಮಲಗುವುದಕ್ಕಿಂತ ಮೊದಲು ಕಾಡಿಸುವ ಚಿಂತೆಯನ್ನೆಲ್ಲಾ ಮರೆಯಲು ಪ್ರಯತ್ನಿಸಬೇಕು.
- ರಾತ್ರಿ ಮಲಗುವಾಗ ಇಂತಿಷ್ಟೇ ಸಮಯಕ್ಕೆ ಹಾಸಿಗೆ ಹಿಡಿಯಬೇಕು ಎಂಬ ದಿನಚರಿ ಇರಬೇಕು.
- ಮಲಗುವ ಮುನ್ನ ತಂಬಾಕು ಮಿಶ್ರಿತ ಪದಾರ್ಥವನ್ನು ಸೇವಿಸಬಾರದು.
- ರಾತ್ರಿಯ ತಲೆ ಸ್ನಾನ ಸುಖ ನಿದ್ದೆಗೆ ನೆರವಾಗುತ್ತದೆ.
- ಹಾಸಿಗೆ ಹಿಡಿದರೂ ನಿದ್ದೆ ಬಾರದಿದ್ದರೆ ಸುಮ್ಮನೆ ಹೊರಳಾಡಬೇಡಿ.
  ನಿಮ್ಮ ಆಸಕ್ತಿಯ ಪುಸ್ತಕವನ್ನೋದಿ ಅಥವಾ ಸಂಗೀತ ಕೇಳಿ ಸ್ವಲ್ಪ ಹೊತ್ತಿನಲ್ಲೇ ಗಾಢ ನಿದ್ದೆ ಒಲಿಯುವುದು.

## -: ಸೂಕ್ತಿ :-

ಯಾವಾತನು ತಾನು ಕಲಿತ ವಿದ್ಯೆಯನ್ನು ತಾನು ಮಾಡುವ ಕೆಲಸದೊಡನೆ ಸಂಬಂಧಪಡಿಸಿ ನೋಡುತ್ತಾನೋ, ಆ ಮಟ್ಟಿಗೆ ಆತ ಬದುಕಿನಲ್ಲಿ ಮುಂದುವರಿಯುತ್ತಾನೆ.

**—ಇಂಗರ್‌ಸಾಲ್**

ಅನುಭವ ಅನ್ನುವುದು ಏನು ಗೊತ್ತೆ ? ನಮ್ಮ ಆಸ್ತಿಯನ್ನೆಲ್ಲ ಕಳೆದುಕೊಂಡ ಬಳಿಕ ನಮ್ಮಲ್ಲಿ ಉಳಿದಿರುವುದು.

**—ಕಾರನೆಟ್**

ನಮ್ಮ ಕೃತಿ ನ್ಯಾಯವಾಗಿದ್ದರೆ ಪರಮಾತ್ಮನೂ ಮಿತ್ರನಾಗುತ್ತಾನೆ.

**—ಶೇಕ್‌ಸ್ಪಿಯರ್**

ಸಂಗ್ರಹ : **ಬಿರುಮಣಿನ ಕೆ. ಪ್ರವೀಣ**
ಮದೆನಾಡು.

# ಅರೆಭಾಷೆಯಲ್ಲಿನ ಅಭಿಮಾನ

ಭಾಷೆಯೆಂಬುದು ವ್ಯಕ್ತಿಯ ವ್ಯಕ್ತಿನಿಷ್ಠೆ ಹಾಗೂ ಸಾಮೂಹಿಕ ಜೀವನಾನುಭವ ಮತ್ತು ವಿಚಾರಗಳ ಅಭಿವ್ಯಕ್ತಿ ಮಾಧ್ಯಮ. ದಕ್ಷಿಣ ಕನ್ನಡದ ಸುಳ್ಯ ಮತ್ತು ಕೊಡಗಿನ ಭಾಗದ ಗೌಡರು ಆಡುವ "ಗೌಡ ಕನ್ನಡ ಭಾಷೆ" ಅಥವಾ "ಅರೆಭಾಷೆ"ಯು ಗೌಡ ಜನಾಂಗದ ಮೂಲರೂಪ ತತ್ವಗಳನ್ನು ಹೊಂದಿದೆ. ಈ ಗೌಡ ಕನ್ನಡವೇ ಭಾಷಾ ಪರಂಪರೆಯಲ್ಲಿ ಉಳಿದು ಬಂದಿರುವ ಗೌಡ ಜನಾಂಗದ ಅಮೂಲ್ಯ ಸೊತ್ತು.

ಆದರೆ ಇತ್ತೀಚೆಗಿನ ವರ್ಷಗಳಲ್ಲಿ ತಮ್ಮ ಮಾತೃಭಾಷೆಯ ಅಭಿಮಾನವನ್ನು ಕಡಿಮೆ ಮಾಡಿ ಇತರೆ ಭಾಷೆಗೆ ಪ್ರೋತ್ಸಾಹ ನೀಡುತ್ತಿರುವುದು ಕಂಡು ಬರುತಿದೆ. ಅದು ಎಷ್ಟರ ಮಟ್ಟಿಗೆ ಹೆಚ್ಚಾಗಿದೆಯೆಂದರೆ ಗೌಡರಾಗಿ ಹುಟ್ಟಿ ಅರೆಭಾಷೆಯನ್ನಾಡಲು ಬಾರದೆ ಕನ್ನಡವೋ ಅಥವಾ ಇಂಗ್ಲೀಷ್ ಭಾಷೆಯಲ್ಲೋ ಮಾತನ್ನಾಡುವ ಪರಿಸ್ಥಿತಿ ಬಂದೊದಗಿದೆ. ಹುಟ್ಟಿದಂತಹ ಮಗುವಿಗೆ ತಮ್ಮ ತಂದೆ ತಾಯಿಯರು ಮಾತೃಭಾಷೆಯಾದಂತಹ ಅರೆಭಾಷೆಯನ್ನು ಕಲಿಸದೆ ಕನ್ನಡ ಅಥವಾ ಇಂಗ್ಲೀಷ್ ಭಾಷೆಯನ್ನು ಕಲಿಸುತಿರುವುದು "ಮಾತೃಭಾಷೆಯ ಹೆಮ್ಮರದ ಬುಡಕ್ಕೆ ಕೊಡಲಿಪೆಟ್ಟು" ಕೊಟ್ಟಂತಾಗಿದೆ. ಮುಂದೆ ಆ ಮಗು ಮಾತೃಭಾಷೆಯಿಂದ ವಂಚಿತನಾಗಿ ಕನ್ನಡ ಇಲ್ಲವೇ ಬೇರೆ ಯಾವುದೋ ಭಾಷೆಯನ್ನು ಮಾತನಾಡುತ್ತದೆ. ಎರಡನೆಯದಾಗಿ ಗೌಡ ಜನಾಂಗದ ಇಬ್ಬರು ವ್ಯಕ್ತಿಗಳು ಪರಸ್ಪರ ಭೇಟಿಯಾದಾಗ ಅರೆಭಾಷೆ ಗೊತ್ತಿದ್ದರೂ ಕೂಡಾ ಸಾಮಾನ್ಯವಾಗಿ ಕನ್ನಡದಲ್ಲೇ ತಮ್ಮ ಮಾತನ್ನು ಪ್ರಾರಂಭಿಸುತ್ತಾರೆ. ಮೊದಲನೆಯದಾಗಿ ಒಂದು ಸಭೆಯೋ ಅಥವಾ ಸಮಾರಂಭವೋ ಇರಲಿ ಅಲ್ಲಿ ನಾಲ್ಕಾರು ಜನ ನಮ್ಮ ಜನಾಂಗದವರು ಸೇರಿದ್ದಲ್ಲಿ ಒಬ್ಬ ಬೇರೆ ಭಾಷೆಯನ್ನಾಡುವ ವ್ಯಕ್ತಿ ಇದ್ದರೆ ಅಲ್ಲಿ ನಮ್ಮ ಜನ ಆ ವ್ಯಕ್ತಿಯ ಭಾಷೆಯನ್ನು ಆಡುತ್ತಾರೆ. ಹಾಗೆಯೇ ಆ ವ್ಯಕ್ತಿ ಅವರ ಭಾಷೆಯನ್ನು ಬಿಟ್ಟು ನಮ್ಮ ಭಾಷೆಯನ್ನು ಬಳಸುವುದೇ ಇಲ್ಲ. ಈ ರೀತಿಯಾದ ಪರಭಾಷೆಯ ವ್ಯಾಮೋಹ ನಮ್ಮ ಸಮಾಜದ ದುರಂತವೇ ಸರಿ. ಈ ತರಹದ ವಿಷಯಗಳನ್ನು ನಮ್ಮ ಸಮಾಜ ಬಾಂಧವರು ಅರಿತು ಅದರ ಬಗ್ಗೆ ಮುಂದಾಲೋಚನೆಯನ್ನು ಹರಿಸಿದರೆ ನಮ್ಮ ಸಮಾಜ ಮತ್ತು ಭಾಷೆ ಮುಂದುವರಿಯುವುದರಲ್ಲಿ ಎರಡು ಮಾತಿಲ್ಲ. ಇದನ್ನು ಜನ ಅರಿಯದೇ ಹೋದರೆ ಅಂತಹವರಿಂದ ನಮ್ಮ ಸಮಾಜ ನಿರೀಕ್ಷಿಸುವುದಾದರೂ ಏನು ? ಜಾತಿ ಬೇಕೋ ? ಬೇಕೆಂದಾದರೆ ಮುಖ್ಯವಾಗಿ ಭಾಷೆಯೂ ಬೇಕು.

"ಒಂದು ಜನಾಂಗವನ್ನು ನಾಶಮಾಡಬೇಕಿದ್ದರೆ ಮೊದಲು ಅದರ ಭಾಷೆಯನ್ನು ನಾಶಮಾಡು" ಇದು ನೆಪೋಲಿಯನ್ ಆಡಿದಂತಹ ಮಾತು. ಈ ಮಾತು ಅಕ್ಷರಶಃ ಸತ್ಯ. ಭಾಷೆ ಉಳಿದು ಮುಂದುವರಿಯದಿದ್ದರೆ ನಮ್ಮ ಸಮಾಜವು ಅಧಃಪತನವಾದೀತು. ಅರೆಭಾಷೆಯಲ್ಲಿ ಕೆಲವು ಜನ–ಪದಗಳು ಜನ್ಮತಾಳಿವೆ. ಅದನ್ನು ಉಳಿಸಿಕೊಂಡು ಬರಬೇಕಾದರೆ ಭಾಷೆಯನ್ನು ಪೋಷಿಸಿಕೊಂಡು ಬರುವುದು ಅತಿಮುಖ್ಯ.

ಇನ್ನು ಮುಂದಿನ ಸಂತತಿಗೆ ಈಗಿನ ಯುವ ಸಂತತಿಯು ಆದರ್ಶ ಮಾರ್ಗದರ್ಶನ ತೋರಿದರೆ ಅದರಿಂದ ಭಾಷೆಯ ಶ್ರೇಯಸ್ಸಿಗೆ ಅದೊಂದು ದಾರಿ ದೀಪವಾದೀತು. ಈ ವಿಷಯದಲ್ಲಿ ಹೆಚ್ಚಿನ ಆಸಕ್ತಿ ವಹಿಸಿ ಮುಂದುವರಿದದ್ದೇ ಆದರೆ ಭಾಷೆಗೂ ನಮ್ಮ ಜನಾಂಗಕ್ಕೂ ಒಳಿತಾಗುವುದರ ಜೊತೆಗೆ ನಮ್ಮ ಸಂಸ್ಕೃತಿ, ಜನ–ಪದ ಕಲೆಗಳು ಉಳಿಯುವಂತಾಗುತ್ತದೆ ಮತ್ತು ಹೆಮ್ಮರವಾಗಿ ಬೆಳೆಯುವಂತಾಗುತ್ತದೆ. ಇದಕ್ಕಾಗಿ ಹಾರೈಸೋಣ.

**ಅಂಬ್ರಾಟ ಭಗವತಿ ಪ್ರಸಾದ್**
**ತಮ್ಮಯ್ಯ,** ಭಾಗಮಂಡಲ

# ಪ್ರಪಂಚದ ಪ್ರಮುಖ ಸ್ವರೂಪಗಳು

1. ಅತಿ ಉದ್ದವಾದ ನದಿ—ನೈಲ್ ನದಿ [ಈಜಿಪ್ಟ್] 4160 ಮೈಲಿ
2. ಅತಿ ಅಗಲವಾದ ನದಿ—ಅಮೆಜಾನ್ ನದಿ [ಅಮೇರಿಕ]
3. ಅತಿ ದೊಡ್ಡ ದ್ವೀಪ—ಗ್ರೀನ್‌ಲ್ಯಾಂಡ್
4. ಅತಿ ಶೀತ ಪ್ರದೇಶ—ವೆರ್ಖೋಯಾಸ್ಕಿ [ಸೈಬೀರಿಯಾ]
5. ಅತಿ ದೊಡ್ಡ ಮರುಭೂಮಿ—ಸಹರಾ [ಆಫ್ರಿಕಾ]
6. ಅತಿ ಎತ್ತರದ ದೇಶ—ಟಿಬೆಟ್
7. ಅತಿ ದೊಡ್ಡ ಭೂಖಂಡ—ಏಷ್ಯಾ ಖಂಡ
8. ಅತಿ ಉಪ್ಪುನೀರಿನ ಸರೋವರ—ಕ್ಯಾಸ್ಪಿಯನ್ ಸಮುದ್ರ
9. ಅತಿ ವಿಶಾಲವಾದ ದೇಶ—ರಷ್ಯಾ
10. ಅತಿ ದೊಡ್ಡ ಅಣೆಕಟ್ಟೆ—ಭಾಕ್ರಾನಂಗಲ್ [ಭಾರತ]

○ಸಂಗ್ರಹ : **ಬಿ. ಸಿದ್ಧರಾಜು,** ಮಡೆ.

# ಕಾಂಗ್ರ್ಯಾಚುಲೇಶನ್

ಕಾಂಗ್ರ್ಯಾಜುಲೇಶನ್, ಥ್ಯಾಂಕ್ಸ್ ಇದರ ಬಳಕೆಯಲ್ಲಿ ಯಾವುದೇ ದೋಷ ಇರಲಿಲ್ಲ. ತಾವು ಪಡೆದುಕೊಂಡ ಉಪಕಾರಕ್ಕೆ ಥ್ಯಾಂಕ್ಸ್ ಹೇಳಬೇಕು ಎನ್ನುವುದು ಪ್ರತಿಯೊಬ್ಬನಿಗೂ [ಇಂಗ್ಲಿಷ್ ಬರದವನಿಗೂ] ತಿಳಿದಿದೆ. ಆದರೆ ನಮ್ಮ ಮನೆಯಲ್ಲಿರುವ ಸಣ್ಣ ಪಾಪುಗೆ ಯಾರಾದರೂ ಏನನ್ನಾದರೂ ಕೊಟ್ಟರೆ ಥ್ಯಾಂಕ್ಸ್ ಹೇಳಬೇಕು ಎಂದು ಹೇಳಿಕೊಟ್ಟಿದ್ದು ಅದು ಈಗ ತನ್ನ ಕೈಯಲ್ಲಿದ್ದುದನ್ನು ಇತರರಿಗೆ ಕೊಟ್ಟಾಗಲೂ ತಾನೆ ಥ್ಯಾಂಕ್ಸ್ ಹೇಳಿಕೊಳ್ಳುತ್ತದೆ. ಇರಲಿ ವಿಷಯಕ್ಕೆ ಬರುವ, ಕಾಂಗ್ರಾಚುಲೇಶನ್ ಸ್ವಲ್ಪ ಅಪರಿಚಿತ ಶಬ್ಧ ಸ್ವಲ್ಪಮಟ್ಟಿಗೆ ಇಂಗ್ಲಿಷ್‌ನ ಜ್ಞಾನವಿಲ್ಲದೆ ಇದನ್ನು ಉಚ್ಚರಿಸಲು ಬರುವುದಿಲ್ಲ. ಅರೆಬರೆ ಇಂಗ್ಲಿಷ್ ಕಲಿತವರು ಕಾಂಗ್ರ್ಯಾಚುಲೇಶನ್ ಅಂತ ನಾಲ್ಕು ಜನರ ಎದುರಿಗೆ ಹೇಳಲೋಗಿ, ಬಾಯಿ ತೊದಲು ಭಾಷಣ ಮಾಡಲು ಮೊದಲ ಬಾರಿ ವೇದಿಕೆ ಏರಿದ ವ್ಯಕ್ತಿಯಂತೆ ಬೆವರುವುದೂ ಇದೆ. ಇಂಗ್ಲಿಷ್ ಮಾತನಾಡಿದರೇನೆ ಸಮಾಜದಲ್ಲಿ ಗೌರವ ಎಂದು ತಿಳಿದಿರುವ ವರ್ಗದವರೂ ಇದ್ದಾರೆ. ಅಂತವರಲ್ಲಿ ಕೆಲವರು ಇಂಗ್ಲಿಷ್ ಬರದಿದ್ದರೂ ತಾವು ಮಾತನಾಡುವಾಗ ತಮಗೆ ಎಷ್ಟು ಇಂಗ್ಲಿಷ್ ಪದಗಳು ಬರುತ್ತೊ ಅಷ್ಟನ್ನೂ ಬಳಸಿ ಉಳಿದ ಶಬ್ಧಗಳನ್ನು ತಮ್ಮ ಮಾತೃ ಭಾಷೆಯಿಂದ ವಾಕ್ಯ ಪೂರ್ಣಗೊಳಿಸುವುದಿದೆ. ಒಂದು ಮಗು ತಮ್ಮ ಮನೆಗೆ ಬಂದವರನ್ನು ಬೀಳ್ಕೊಡುವಾಗ ಟಾ ಟಾ ಮಾಡುತ್ತಿತ್ತು. ಆ ಮಗುವನ್ನು ಎತ್ತಿಕೊಂಡಿದ್ದ ಮುದುಕಮ್ಮ ಹ್ಯಾಂಡ್‌ನಲ್ಲೆ ಅಲ್ಲ ಮೌತ್‌ನಲ್ಲಿ ಹೇಳು ಎನ್ನುತ್ತಿತ್ತು. ಇನ್ನೂ ಕೆಲವರು ತುಂಬಾ ಜಂಬ ಮಾಡುತ್ತಿದ್ದರೆ, ಬಿಡೊ, ಅವ ಎಸ್, ನೋ, ಥ್ಯಾಂಕ್ಸ್ ನವ ಎನ್ನುವುದಿದೆ. ಈ ಎಸ್,ನೋ, ಥ್ಯಾಂಕ್ಸ್ ನೊಂದಿಗೆ ಇವರು ಕಾಂಗ್ರ್ಯಾಚುಲೇಶನ್ ಮತ್ತು ಸಿಂಪಥೈಜ್ ಕೂಡ ಅಭ್ಯಾಸ ಮಾಡಿಕೊಂಡಿರುತ್ತಾರೆ. ಇಂತವನೊಬ್ಬ ನನ್ನ ಅಜ್ಜ ತೀರಿಕೊಂಡಾಗ ಕಾಂಗ್ರ್ಯಾಚುಲೇಶನ್ ಎಂದಿದ್ದ. ಹೊಸ ಚಪ್ಪಲಿ ಹಾಕಿಕೊಂಡಾಗಲೂ ಕಾಂಗ್ರ್ಯಾಚುಲೇಶನ್,ಬಟ್ಟೆ ವಾಚ್ ಅದು ಹಳತ್ತಿದ್ದರೂ ನೋಡುವವನ ಕಣ್ಣಿಗೆ ಹೊಸದಾಗಿ ಕಂಡರೆ ಬಿಡದೆ ಸಿಗುವ ಕಾಂಗ್ರ್ಯಾಚುಲೇಶನ್, ಇನ್ನೂ ಕಾಲೇಜು [ಈಗ ಪೌಢಶಾಲಾ] ದಿನಗಳಲ್ಲಿ ಹುಡುಗ–ಹುಡುಗಿ ಮಾತನಾಡುತ್ತಿರುವುದು ಕಂಡರೆ ಅವರುಗಳ ಸ್ನೇಹಿತರಿಂದ ಸಿಗುವ ಕಾಂಗ್ರ್ಯಾಚುಲೇಶನ್‌ಗಳ ಹೊರೆ. ಇಲ್ಲಿ ಕಾಂಗ್ರ್ಯಾಚುಲೇಶನ್‌ಗಳ ಹೊರೆ ಎಂದು ಏಕೆ ಹೇಳುತ್ತಿದ್ದೇನೆಂದರೆ, ಅವ ಮತ್ತೆ ತನ್ನ ಸ್ನೇಹಿತರ ಗುಂಪಿಗೆಲ್ಲಾ ಸಾಲ ಮಾಡಿಯೋ ಇಲ್ಲಾ ಅಪ್ಪನ ಜೇಬಿನಿಂದ ಹಣ ಎಗರಿಸಿಯೋ ಟ್ರೀಟ್ ಕೊಡಿಸಬೇಕಲ್ಲಾ... ಇನ್ನೂ ಮದುವೆಗೆ ಹುಡುಗ/ಗಿ ಗೊತ್ತಾದರೆ, ಏನು ಶುಭಾಶಯ ಕೋರಬೇಕೋ ಅಲ್ಲಿ ನೇರವಾಗಿ ಕಾಂಗ್ರ್ಯಾಚುಲೇಶನ್ ಹೇಳಿಬಿಡುತ್ತಾರೆ. ಒಬ್ಬ ಹುಡುಗ/ಗಿ ಗೆ ಬಹಳ ವರ್ಷಗಳಿಂದ ಎಲ್ಲೂ ಸಂಬಂಧ ಕೂಡಿಬರದೆ ಮದುವೆಯ ವಯಸ್ಸು ಮೀರುತ್ತಿದ್ದು ಇವನಿಗೆ/ಳಿಗೆ ಗೃಹಸ್ತಾಶ್ರಮದ ಫಲ ಇಲ್ಲವೇನೊ ಎಂದು ಆಪ್ತರು ಅಂದುಕೊಳ್ಳುತ್ತಿದ್ದ ಸಂದರ್ಭದಲ್ಲಿ ಅಂತವರಿಗೊಂದು ಸಂಬಂಧ ಕೂಡಿಬಂದರೆ ಅದು ಅವರ ಸಾಧನೆ ಎನಿಸಿ ಅವರಿಗೆ ಕಂಗ್ರ್ಯಾಚುಲೇಶನ್ ಹೇಳಿದ್ದಿರಬೇಕು. ಮತ್ತೆ ಅದು ಕಂಟ್ರೋಲ್ಡ್ ಇದ್ದದ್ದು ಓಪನ್ ಮಾರ್ಕೆಟ್ ಆಗಿರಬೇಕು. ಈ ಪುರಾಣ ಮುಗಿಯುವಂತಹವಲ್ಲ. ಕೊನೆಯದಾಗಿ ಒಂದುಘಟನೆ ಹೇಳಿ ಮುಗಿಸಿಬಿಡುತ್ತೇನೆ. ಒಬ್ಬ ಅಲ್ಪನಿಗೆ ಐಶ್ವರ್ಯ ಬಂದಿತ್ತು. ಅವ ಒಂದು ಮದುವೆ ಚಪ್ಪರ ಸಮಾರಂಭದಲ್ಲಿ ದಂತ ಭಗ್ನಗೊಳಿಸಿಕೊಂಡಿದ್ದ. ಎಷ್ಟಾದರೂ ಐಶ್ವರ್ಯವಂತನಲ್ಲವೆ ! ಚಿನ್ನದ ಹಲ್ಲು ಕಟ್ಟಿಸಿಕೊಂಡಿದ್ದ. ಅದನ್ನು ಕಂಡ ಮಂದಿ ಏನೋ ಚಿನ್ನದ ಹಲ್ಲಾ ಕಾಂಗ್ರ್ಯಾಚುಲೇಶನ್ ಅಂದೇ ಬಿಟ್ಟರು. ●

**ಕುಂಬುಗೌಡನ ಯು. ರಂಜಿತ್**
ಮಕ್ಕಂದೂರು

## ನಗೆ ಹನಿಗಳು

ಬಿನ್ನಿಪೇಟೆಯಲ್ಲಿರುವ ಒಂದು ಫ್ಯಾಕ್ಟರಿಯಲ್ಲಿ ಒಳಗಡೆ ಹೀಗೊಂದು ಬೋರ್ಡು ಹಾಕಿದ್ದರು.

"ಉದ್ದನೆಯ ಲಂಗವನ್ನು ಹಾಕಿದ ಹುಡುಗಿಯರು ಯಂತ್ರಗಳ ಬಗ್ಗೆ ಎಚ್ಚರವಾಗಿರಿ !"

ಮತ್ತು "ಗಿಡ್ಡ ಲಂಗ ಹಾಕಿದವರು ಇಲ್ಲಿನ ನೌಕರರ ಬಗ್ಗೆ ಜಾಗರೂಕರಾಗಿರಿ.

❁ ❁ ❁

ಆ ದಿನ ರಾತ್ರಿ ಹತ್ತು ಗಂಟೆಯ ಹೊತ್ತಿನಲ್ಲಿ, ದೀಪದ ಬೆಳಕಿನಲ್ಲಿ ನಿಪುಣಪ್ಪ ರಸ್ತೆಯಲ್ಲಿ ಏನೋ ಹುಡುಕುತ್ತಿದ್ದುದನ್ನು ನೋಡಿ, ಅಲ್ಲಿಗೆ ಬಂದ ಪೋಲಿಸ್ ಕೇಳಿದಾಗ ಹೇಳಿದ.

"ಒಂದು ರೂಪಾಯಿ ನಾಣ್ಯ ಕಳೆದು ಹೋಗಿದೆ ಹುಡುಕುತ್ತಿದ್ದೇನೆ"

"ಎಲ್ಲಿ ಕಳೆಯಿತು ?"

"ಐದನೇ ರಸ್ತೆಯಲ್ಲಿ"

"ಆದರೆ ಇದು ಆರನೇ ರಸ್ತೆ ?"

"ಹೌದು, ಆದರೆ ಇಲ್ಲಿ ಜಾಸ್ತಿ ಬೆಳಕಿದೆ ಅದಕ್ಕೇ !"

● **ಕೂಡಕಂಡಿ ಅನಿತಾ ನಂಜುಂಡ**
ಚೇರಂಬಾಣೆ

# ಕೊಡಗಿನ ಗೌಡ ಜನಾಂಗ ಮತ್ತು ಸಮಾಜದ ಏಳ್ಗೆ

ಶ್ರೀ ಕಾವೇರಿ ಮಾತೆಯ ಪವಿತ್ರ ಭೂಮಿಯಲ್ಲಿ ಇತರ ಮೂಲನಿವಾಸಿಗಳಂತೆ ಜನ್ಮ ಹಿಡುವಳಿ ಜನಾಂಗವಾಗಿ ಕೊಡಗು 'ಚರಿತ್ರಾ ಪ್ರಖ್ಯಾತಿ ದಿಟ್ಟ ವೀರಯೋಧ'ರೆಂದು ಹೆಸರು ಗಳಿಸಿ ಬೆಳೆದು ಇಂದು ಜನಸಂಖ್ಯೆಯಲ್ಲಿ ಇತರ ಜನಾಂಗದವರಿಗಿಂತ ನಾವು ಹೆಚ್ಚು ಎಂಬ ಹೆಮ್ಮೆಯ ಮೆಟ್ಟಲೇರಿದ್ದೇವೆ.

ಕೊಡಗು ಅಕಾಡಮಿ ಸ್ಥಾಪನೆಯಾಗಿರುವುದಕ್ಕೆ ನಾವು ಸಂತೋಷಪಡಬೇಕು. ಅದು ಎಲ್ಲಾ ಜನಾಂಗದವರಿಗೆ ಅನ್ವಯ

**ಬೈತಡ್ಕ ಎ. ಬೆಳ್ಯಪ್ಪ**
ಮಡಿಕೇರಿ

ವಾದದ್ದು. ನಮಗೆ ಈ ಸಂಸ್ಥೆಯಲ್ಲಿ ಪ್ರಾತಿನಿಧ್ಯ ದೊರೆತಿಲ್ಲ ಕಾರಣ ಇಷ್ಟೇ—ನಮ್ಮ ಸಮಾಜ ಕಟ್ಟುನಿಟ್ಟನಿಂದ ನಮ್ಮ ಸಂಸ್ಕೃತಿಯನ್ನು ಬೆಳೆಸಲು ಶ್ರಮ ಪಡುತ್ತಿಲ್ಲ. ಕೊಡಗು ಉತ್ಸವದಲ್ಲಿ ಆಯ್ದುಕೊಂಡ ಕಾರ್ಯಕ್ರಮಗಳು ಬರೇ ಒಂದೆರಡು ಅಷ್ಟೆ. ಅದೂ ಕೂಡ ಕೊನೇ ಘಳಿಗೆಯಲ್ಲಿ ಜಿಲ್ಲಾಧಿಕಾರಿಯವರ ಒತ್ತಾಸೆಯಿಂದ ಕಾರ್ಯಕ್ರಮ ಪಟ್ಟಿಯಲ್ಲಿ ಸೇರಿಸಿಕೊಳ್ಳಲಾಗಿತ್ತು. ಸೇರಿಸಿಕೊಂಡ ಕಾರ್ಯಕ್ರಮವನ್ನೂ ನಡೆಸಿಕೊಡಲು ವೇದಿಕೆ ಮೇಲೆ ಬಾರದೆ ಹಿಂದೆ ಬಿದ್ದ ನಮ್ಮ ಜನಾಂಗದ ಅಸಡ್ಡೆಯ ವರ್ತನೆಯನ್ನು ಒಬ್ಬ ವೈದ್ಯ ಅವರ ಸ್ವಂತ ಅನುಭವದ ಮಾತುಗಳಲ್ಲಿ ಕೇಳಿದರೆ ಕಪಾಳಮೋಕ್ಷವಾಗುವ ಕಹಿ ವಾತಾವರಣ. ಸಮಾಜದ ಹಿರಿಯ ವ್ಯಕ್ತಿಗಳು ಆ ದಿಸೆಯಲ್ಲಿ ಇತರ ಜನಾಂಗದವರಷ್ಟು ಮುತುವರ್ಜಿ ವಹಿಸಿಲ್ಲವೆಂದಾಗುತ್ತದೆ. ಅದೇ ರೀತಿ ಸುಳ್ಯದ ಸಮ್ಮೇಳನದಲ್ಲೂ ಕೊಡಗಿನ ಗೌಡಬಾಂಧವರು ತಮ್ಮದೇ ಆದ ಚರಿತ್ರಾರ್ಹದ ಕಾರ್ಯಕ್ರಮಗಳನ್ನು ಹೊಂದಿಸಿಕೊಡಲು ಬೇಡಿಕೆಯಿದ್ದರೂ ಅದಕ್ಕೂ ಹಿಂದೇಟು. ಸಮಾಜಕ್ಕೆ ಸಂಬಂಧಪಟ್ಟ ಗಣ್ಯ ವ್ಯಕ್ತಿಗಳ ಶ್ರಮ ಈ ದಿಸೆಯಲ್ಲಿ ಏನೂ ಸಾಲದು ಮತ್ತು ಹೊಂದಾಣಿಕೆ ಇಲ್ಲ ಎಂಬುದು ಅವರ ನಿಕಟವರ್ತಿಗಳಿಂದ ಕೇಳಿ ಬಂದ ಮಾತು ಇದು. ಸಮಾಜಕ್ಕೆ ಅದರ ಮೂಲ ಉದ್ದೇಶ ಮತ್ತು ಹೊಣೆಗಾರಿಕೆಗಳು ಇಲ್ಲದಿದ್ದರೆ ಮುಂದೆ ಜನಾಂಗ ತನ್ನ ಸಂಸ್ಕೃತಿಯನ್ನು ಹೇಗೆ ಉಳಿಸಿ ಬೆಳೆಸಿಕೊಂಡು ಬಂದೀತು ಎಂಬುದೆ ಈ ಚಿಕ್ಕ ಲೇಖನದ ಮುಖ್ಯ ಅಂಶವಾಗಿರುತ್ತದೆ. ಮುಂದೆ ನಾವು ಯಾರು, ನಮ್ಮ ಸಂಸ್ಕೃತಿ ಯಾವುದು, ಎಂಬುವುದನ್ನು ಮರೆತು ಪರರ ಸಂಸ್ಕೃತಿಗೆ ಮಾರು ಹೋಗುವುದರಲ್ಲಿ ನಾವು ಎಚ್ಚರ ವಹಿಸಬೇಕು. ನಾವು ಇತರ ಯಾವುದೇ ಜನಾಂಗದ ಸಂಸ್ಕೃತಿಯನ್ನು ದೂಷಿಸಬಾರದು. ನಮ್ಮ ಜನಾಂಗ ಎಷ್ಟಿದೆ, ಎಷ್ಟು ಎಚ್ಚೆತ್ತಿದೆ? ಆದರೆ ಸಮಾಜಗಳು ತಮ್ಮ ಮೂಲೋದ್ದೇಶ ಕಾರ್ಯನಿರ್ವಹಣಾ ಪಾತ್ರದಲ್ಲಿ ಹಿಂದೆ ಬಿದ್ದಿವೆ. ಸಮಾಜ ಎಚ್ಚೆತ್ತಿಲ್ಲವಾದ್ದರಿಂದ ಸಂಸ್ಕೃತಿ ಬೆಳೆದಿಲ್ಲ.

ಮಾನವ ಕುಲ ಒಂದೇ. ಆದರೆ ಸಂಘ ಸಂಸ್ಥೆಗಳು ಹುಟ್ಟಿರುವುದು ಅದರ ಜನಾಂಗದ ಸಂಸ್ಕೃತಿಯನ್ನು ಎತ್ತಿ ಬೆಳೆಸಿ, ಉಳಿಸಿಕೊಂಡು ಬರುವುದಕ್ಕಾಗಿ. ಮಾನವ ಒಂದು ಸಂಘಜೀವಿ. ಈ ತಾಂತ್ರಿಕ ಯುಗದಲ್ಲಿ ನಮ್ಮ ಜನಾಂಗದವರು ಸಿಂಹಗಳೆಂದು ಬಿರುದು ಪಡೆದುಕೊಂಡರೂ ಇನ್ನೂ ನಿದ್ರಾವಸ್ಥೆಯಲ್ಲಿರುವವರನ್ನು ಎಚ್ಚೆತ್ತು ಎದ್ದೇಳಿ ಎಂದು ಶ್ರೀ ಶಿವರಾಯ್ ಅವರು ತನ್ನ ಮನದಾಳದಿಂದ ನೊಂದು ಎಬ್ಬಿಸಲು ಪ್ರಯತ್ನಿಸಿದ್ದಾರೆ. ಸಮಾಜ ಎಂಬುದು ಒಂದು ಸಂಘ ಸಂಸ್ಥೆ, ಕಟ್ಟಡ ಅದರ ಆಸ್ತಿ. ಶ್ರಮದಾನಿಗಳೇ ಆ ಆಸ್ತಿಯ ಆಧಾರ ಸ್ತಂಭಗಳು. ಶ್ರಮವಹಿಸಿ ಕೊಡಗಿನ ನಾನಾ ಕಡೆ ಸಮಾಜದ ಕಟ್ಟಡಗಳನ್ನು ಕಟ್ಟಿಸಿರುವುದು ತುಂಬಾ ಹೆಮ್ಮೆಯ ವಿಷಯ. ಶ್ರಮ ವಹಿಸಿರುವ ಎಲ್ಲಾ ಬಾಂಧವರನ್ನು ನಾವುಗಳು ಎಂದೂ ಮರೆಯಬಾರದು. ಅರೆಭಾಷಿಕ ಸಂಸ್ಕೃತಿಯು ಅಸ್ತಂಗತವಾಗದಂತೆ ಸಮಾಜದ ಮುಖ್ಯಸ್ಥರು ಗಮನ ಹರಿಸಬೇಕು ಎಂದು ಕೋರಿರುವ ಶ್ರೀ ಅಮೆ ಶಿವರಾಯ್ ಅವರ ವಿಚಾರಗಳಿಗೆ ಧ್ವನಿಗೂಡಿಸುತ್ತಾ ನಮ್ಮ ಜನಾಂಗದ ಏಳ್ಗೆಯ ಹಿತದೃಷ್ಟಿಯಿಂದ ಈ ಕೆಲವೊಂದು ಅಂಶಗಳನ್ನು 'ಕೊಡಗು ಸಂಗಾತಿ'ಯ ಮೂಲಕ ಓದುಗರ ಗಮನಕ್ಕೆ ತರಲು ಇಷ್ಟಪಡುತ್ತೇನೆ. ಕೊಡಗು ಸಂಗಾತಿಯು ದಿಟ್ಟ ಹೆಜ್ಜೆಯಲ್ಲೇ ಮುಂದೆ ಸಾಗುತ್ತಾ ಸಂಸ್ಕೃತಿಯ ಉಳಿವುಗಾಗಿ ಶ್ರಮಪಡಲು ಶಕ್ತಿ ನೀಡಲೆಂದು ನಮ್ಮ ಕುಲದೇವರಾದ ಶ್ರೀ ವೆಂಕಟರಮಣಸ್ವಾಮಿಯನ್ನು ಪ್ರಾರ್ಥಿಸುತ್ತೇನೆ. ಮುಖ್ಯವಾದ ಅಂಶಗಳೆಂದರೆ,

1. ನಮ್ಮ ಸಮಾಜದ ಕಟ್ಟಡಗಳು ಬರೇ ಸಂಪಾದನೆ ಮಾಡುವ ಆಸ್ತಿ ಮಾತ್ರ ಆಗಿರದೆ,ಅದು ನಮ್ಮ ಸಂಸ್ಕೃತಿಯ ಏಳ್ಗೆಯ ಕನಿಷ್ಠ ಅವಶ್ಯಕತೆಗಳಿಗೆ ಆದ್ಯತೆ ನೀಡುತ್ತಾ ಅದಕ್ಕನುಗುಣವಾಗಿ ಕಾರ್ಯನಿರ್ವಹಿಸುವ ಕೇಂದ್ರವಾಗಿರಬೇಕು.

2. ಮಡಿಕೇರಿ ಗೌಡಸಮಾಜವು ಕೊಡಗಿನ ಉಳಿದ ಎಲ್ಲಾ ಗೌಡ ಸಮಾಜಗಳಿಗೆ ಮುಖ್ಯ ಕಛೇರಿ. ಅಂದರೆ ಇದು ನಮ್ಮ ಸಂಸ್ಕೃತಿಯ ಬಗ್ಗೆ ಶಾಸಕಾಂಗವಾಗಿ ಕಾರ್ಯ ನಿರ್ವಹಿಸುವಂತಾಗಬೇಕು.

3. ಆರಿಸಿ ಬಂದ ಪ್ರತಿನಿಧಿಗಳು, ಆಡಳಿತ ವರ್ಗದವರು ತಿಂಗಳಿಗೊಮ್ಮೆ ಕಡ್ಡಾಯವಾಗಿ ಸಭೆ ಸೇರಿ ಪ್ರಮುಖ ವಿಚಾರಗಳ ಬಗ್ಗೆ ಚರ್ಚೆ ನಡೆಸಿ ಅದನ್ನು ಕಾರ್ಯಗತ

ವಾಗುವಂತೆ ಪ್ರಯತ್ನಿಸಬೇಕು.

4. ನಮ್ಮ ಕೊಡಗು ಗೌಡ ಸಂಸ್ಕೃತಿಯನ್ನು ಉಳಿಸಿ ಬೆಳೆಸಲು ಸ್ವಪ್ರಯತ್ನ ಹಾಗೂ ಅದಕ್ಕೆತಕ್ಕ ನಿಯಮಾವಳಿ, ಶಿಸ್ತಿನ ಕ್ರಮಗಳು ಮಡಿಕೇರಿ (ಕೇಂದ್ರ) ಗೌಡ ಸಮಾಜದಿಂದಲೇ ಹೊರಡುತ್ತಿರಬೇಕು.

5. ಸಂಸ್ಕೃತಿಗೆ ಸಂಬಂಧಪಡುವಂತ ಹೆಚ್ಚು ಹೆಚ್ಚು ಶಾಸ್ರ್ತೋಕ್ತವಾದ ಬರವಣಿಗೆಗಳನ್ನು ನಮ್ಮ ಹಿರಿಯ ಅನುಭವಸ್ಥರಿಂದ ತರಿಸಿ ಅಚ್ಚು ಹಾಕಿಸಿ ನಿಧಾನವಾಗಿ ಪುಸ್ತಕ ಭಂಡಾರವನ್ನು ಮಾಡಬೇಕು.

6. ಸಮಾಜದ ಕಟ್ಟಡಗಳಲ್ಲಿ ಮದುವೆ ಶುಭಕಾರ್ಯಗಳನ್ನು ಮಾಡುವ ವೇಳೆಗಳಲ್ಲಿ ಕಡ್ಡಾಯವಾಗಿ ಅದಕ್ಕೆ ತಕ್ಕ ಉಡುಪುಗಳನ್ನು ತೊಟ್ಟು ಶಾಸ್ತ್ರಾದಿಗಳನ್ನು ಮಾಡಬೇಕು. ವರ ಮತ್ತು ವಧುವು ನಮ್ಮ ಸಂಸ್ಕೃತಿಯ ಪಕ್ಕಾ ಉಡುಪಿನಲ್ಲಿರಲೇಬೇಕು. ಶಾಸ್ತ್ರಗಳನ್ನು ಮಾಡುವ ತಂಡವು ಕೂಡಾ ಅಷ್ಟೆ ನೀಟಾದ ಉಡುಪಿನಲ್ಲಿರಬೇಕು. ಪೊತ್ತಾರ್ತೆ ಆಗಲೇಬಾರದು. ಹಾಗೆನೆ ಸಂಸ್ಕೃತಿಯ ಉಡುಪನ್ನು ಹಂತಹಂತವಾಗಿ ಕಡ್ಡಾಯ ಮಾಡುವ ಕೆಲಸ ಸಮಾಜವು ಮಾಡಬೇಕು. ನಮ್ಮ ಶುಭಕಾರ್ಯಗಳಿಗೆ ನಮ್ಮ ಗೌಡ ಭಾಂದವರಲ್ಲದೆ ಇತರ ಎಲ್ಲಾ ವರ್ಗದ ಭಾಂದವರೂ ಆಹ್ವಾನಿತರಾಗಿರುತ್ತಾರೆ. ಹಾಗಿರುವಾಗ ನಮ್ಮ ಸಂಸ್ಕೃತಿಯ ಬಗ್ಗೆ ಹೆಮ್ಮೆ ಇರಬೇಕು.

7. ಉಡುಪು ತೊಡುಪುಗಳ ಉಲ್ಲಂಘನೆ ಮಾಡುವಂತಹ ಜನಾಂಗ ತನ್ನ ಸಂಸ್ಕೃತಿಯನ್ನು ಹೇಗೆ ಕೊಂಡಾಡಲು ಸಾಧ್ಯ? ಉಲ್ಲಂಘನೆ ಮಾಡುವ [ಶಾಸ್ತ್ರಕ್ರಮಗಳನ್ನು ಮಾಡುವ ವೇಳೆ] ವರಿಗೆ ಹಣ ರೂಪದಲ್ಲಿ ಮುಖ್ಯಸ್ಥರು ದಂಡ ಹಾಕಿ ಆ ಹಣವನ್ನು ಸಮಾಜಕ್ಕೆ ಒಪ್ಪಿಸುವಂತಾಗಬೇಕು. ಸಮಾಜದ ಮುಖ್ಯಸ್ಥರುಗಳು ಈ ನಿಟ್ಟಿನಲ್ಲಿ ತುಂಬಾ ಕಟ್ಟು ನಿಟ್ಟಾಗಿರಬೇಕು. ಕ್ಷುಲ್ಲಕ ವಿಷಯಗಳಿಗೆ ಮಾತು ಮಾತು ಬೆಳೆದು ಅಶಾಂತ ವಾತಾವರಣ ವುಂಟಾಗದಂತೆ ನೋಡಿಕೊಳ್ಳಬೇಕು.

8. ಊಟದ ವೇಳೆಯಲ್ಲಿ ಸಭ್ಯತೆ ಅತೀ ಮುಖ್ಯ. ಹೀಗೆ ಹಲವಾರು ವಿಷಯಗಳಿಗೆ ಸಂಬಂಧಪಡುವಂತೆ ಸಮಾಜಗಳಲ್ಲಿ ನಿಯಮಾವಳಿ ಪಟ್ಟಿ ಇರಬೇಕು.

ಇಂತಹ ಮುಖ್ಯ ವಿಷಯಗಳನ್ನು ಅಧ್ಯಯನ ಮಾಡಿ ಸಮಾಜದ ವತಿಯಿಂದ ಆಯಾಯ ಕಮಿಟಿ ವರ್ಗದವರನ್ನು ಸಮಾಜ ತಯಾರು ಮಾಡಬೇಕು. ಆಡಳಿತ ವರ್ಗದವರು ಈ ಮೇಲ್ಕಾಣಿಸಿದ ಹಾಗೂ ಇನ್ನೂ ಹಲವಾರು ಮುಖ್ಯ ವಿಷಯಗಳ ಬಗ್ಗೆ ಚಿಂತನೆಮಾಡಿ, ಅದನ್ನು ಕಾರ್ಯರೂಪಕ್ಕೆ ತರುವಂತಾದರೆ ನಮ್ಮ ಜನಾಂಗದ ಏಳ್ಗೆ ಆಗುವುದರಲ್ಲಿ ಸಂಶಯವಿರಲಾರದು ಎಂದು ಆಶಿಸೋಣವೆ?

---

## : ಒಂದೇ ಉತ್ತರ :

ಡಾಕ್ಟರ್ : ನಿನ್ನ ಕಾಯಿಲೆ ಏನಮ್ಮ?
ನರ್ಸ್ : ನಿನ್ನ ಹೆಸರು ಏನಮ್ಮ? ಉತ್ತರ : ಸೀತ

○ ○ ○

ಹುಡುಗ : ಅರ್ಧ ಕೇಜಿ ಬೇಳೆಗೆ ಎಷ್ಟು ರೂಪಾಯಿ?
ಇನ್ನೊಬ್ಬ : ನಮ್ಮ ದನಗಳನ್ನು ಕಂಡೆಯಾ? ಉತ್ತರ : ನಾಕಾಣೆ

○ ○ ○

ಒಬ್ಬಳು : ನೀನು ಕಣ್ಣಿಗೆ ಹಾಕಿರುವುದೇನು?
ಇನ್ನೊಬ್ಬ : ನೀನು ಎಲ್ಲಿಗೆ ಹೋಗುತ್ತಿರುವೆ? ಉತ್ತರ : ಕಾಡಿಗೆ

● ಪೆಮ್ಮಟಿ ಅರು ಮುತ್ತಪ್ಪ, ಮಾಲ್ದಾರೆ.

○ ○ ○

## : ನುಡಿ ಮುತ್ತು :

○ ತಾರುಣ್ಯ ಗುಲಾಬಿಯ ಮಾಲೆ, ವೃದ್ಧಾಪ್ಯ ಮುಳ್ಳಿನ ಕಿರೀಟ

–ಅರಿಸ್ಟಾಟಲ್.

● ಬಬೀತಾ ರಾಮೇಗೌಡ

## ತಿಮ್ಮ

ಪರವೂರಿಗೋಗಿ
ಹೋಟೇಲ್
ಕ್ಲೀನರಾಗಿ
ಕೆಲಸ ಮಾಡುವ
ತಿಮ್ಮ
ತನ್ನೂರಿಗೆ
ಬಂದು ಹೇಳುವ
ತಾನೊಬ್ಬ
ಹೋಟೆಲ್
ಮಾಲಿಕನೆಂದು

● ಕೋಳಿಮಾಡು ಪಿ. ಭವಾನಿ
ವಿರಾಜಪೇಟೆ.

# ಮಹಾಮಾತೆ ಮದರ್ ತೆರೇಸಾ ಇನ್ನಿಲ್ಲ

ಮದರ್ ತೆರೇಸಾ—ಈ ಹೆಸರು ಪ್ರೀತಿ, ಮಮತೆ, ಔದಾರ್ಯ, ಆರೈಕೆ, ರಕ್ಷಣೆ, ಚಿಕಿತ್ಸೆ ಇವೆಲ್ಲವನ್ನು ಬಲು ಅರ್ಥಪೂರ್ಣವಾಗಿ ಧ್ವನಿಸಿ ಇಡೀ ಜಗತ್ತಿಗೇ ಪರಿಚಿತರಾಗಿ ತಾಯಿ ಸ್ಥಾನವನ್ನು ತುಂಬಿ, ಜಗತ್ತಿನಾದ್ಯಂತ ಸೇವಾ ಸದನಗಳ ಸಾಮ್ರಾಜ್ಯವನ್ನೇ ಕಟ್ಟಿದ ಮಹಾನ್ ಮಾತೆಯದು. ಸುಮಾರು 71 ವರುಷಗಳ ಸೇವೆಯಲ್ಲಿ

**ಗೀತಾ ನೋಂಟಡ್ಕ**

ಅನಾಥರು ಮತ್ತು ನೊಂದವರ ಕಣ್ಣೀರ ತೊಡೆಯಲು ಅವಿರತವಾಗಿ ಶ್ರಮಿಸಿದ ಶಾಂತಿದೂತೆ, ತಾಯಿ ಮಾತೆ ಮದರ್ ತೆರೇಸಾ ಇನ್ನಿಲ್ಲವಾಗಿದ್ದಾರೆ.

ಕಳೆದ ತಿಂಗಳಷ್ಟೆ ತಮ್ಮ 87ನೇ ಹುಟ್ಟು ಹಬ್ಬ ಆಚರಿಸಿಕೊಂಡಿದ್ದ ತೆರೇಸಾ ದಿನಾಂಕ 5-9-97ರ ಶುಕ್ರವಾರ ರಾತ್ರಿ ನಿಧನರಾದರು. ಅವರ ಅನಾರೋಗ್ಯ ವರ್ಷದ ಹಿಂದೆಯೇ ಜಗತ್ತಿನಲ್ಲೇ ದೊಡ್ಡ ದುಃಖದ ಅಲೆಯನ್ನೇ ಎಬ್ಬಿಸಿತ್ತು. ಹೀಗಿದ್ದರೂ ತನ್ನ ಅನಾರೋಗ್ಯವನ್ನು ಲೆಕ್ಕಿಸದೇ ಬಡವರ, ಧೀನ ದಲಿತರ, ಅನಾಥರ ಸೇವೆಯಲ್ಲಿ ಸ್ವಲ್ಪವೂ ಚ್ಯುತಿ ಬರದ ರೀತಿಯಲ್ಲಿ ಓಡಾಡಿದ ತೆರೇಸಾರವರನ್ನು ಪ್ರಕೃತಿ ನಿಯಮವು ಯಾರೂ ಉಲ್ಲಂಘಿಸಲು ಸಾಧ್ಯವಿಲ್ಲದಂತೆ ಮಾಡಿತು.

1910 ಆಗಸ್ಟ್ 27ರಂದು ಯುಗೋಸ್ಲಾವಿಯಾದ ಸ್ಕಾಪ್‌ಜೀ ಎಂಬಲ್ಲಿ ತಂದೆ ನಿಕೋಲಾಸ್ ಜೊಜಾಕ್ಸಿಯಾ, ತಾಯಿ ಡ್ರಾಣಾ ದಂಪತಿಗಳ ಸುಂದರ ಹೆಣ್ಣು ಮಗು ಮುಂದೆ ತನ್ನ ಸುವಾಸನೆಯನ್ನು ವಿಶ್ವಕ್ಕೇ ಬೀರಲಿದೆ ಎಂಬುದು ತಿಳಿದಿತ್ತೋ ಏನೋ ಎಂಬಂತೆ ಅವರು ಮಗುವಿಗೆ "ಏಗನ್ಸ್ ಗಾನ್‌ಗ್ಸಾ ಜೊಜಾಕ್ಸಿಯಾ" ಎಂದು ಹೆಸರಿಟ್ಟರು. (ಗಾನ್‌ಗ್ಸಾ ಎಂದರೆ ಮೊಗ್ಗು ಎಂದರ್ಥ) ಈ ಮಗುವೇ ಮುಂದೆ ಇಡೀ ಜಗತ್ತಿನಲ್ಲಿ ಕಡು ಬಡವರಿಗೆ, ರೋಗಿಗಳಿಗೆ, ಅನಾಥರಿಗೆ, ನೊಂದವರಿಗೆ ಬೀದಿ ಪಾಲಾದವರಿಗೆ ಆತ್ಮೀಯ ತಾಯಿ ಆದ ಮದರ್ ತೆರೇಸಾ.

ತೆರೇಸಾ—ಇದು ಅವರು ಕ್ರೈಸ್ತ ಸನ್ಯಾಸಿನಿಯ ದೀಕ್ಷೆ ಪಡೆದಾಗ ದೊರೆತ ಹೆಸರು. ಇದು ಸ್ಪೆಯ್ನ್‌ನ ಧಾರ್ಮಿಕ ಸುಧಾರತಿ, ಓರ್ವ ಕಾರ್ಮಲೈಟ್, ಸನ್ಯಾಸಿನಿಯ ಹೆಸರು. ಹೂವಿನ ಮೊಗ್ಗಿನಂತಿದ್ದ ಮೃದು ಮನದ ಗಾನ್‌ಗ್ಸಾ, ತೆರೇಸಾ ಹೆಸರು ಪಡೆದುದು ಬಲು ಅರ್ಥಪೂರ್ಣ. 18ನೇ ವಯಸ್ಸಿನಲ್ಲಿ ಮನೆ ಬಿಟ್ಟು ಸನ್ಯಾಸಿನಿಯಾಗಿ ಡುಬ್ಲಿನ್‌ಗೆ ತೆರಳಿ, 1929ರಲ್ಲಿ ಭಾರತಕ್ಕೆ ಬಂದು ಕಲ್ಕತ್ತಾದ ಕಾನ್ವೆಂಟ್ ಶಾಲೆ ಸೇರಿ, 1948ರಲ್ಲಿ ಕೊಳಚೆ ಪ್ರದೇಶದ ಮಕ್ಕಳಿಗಾಗಿ ಕಲ್ಕತ್ತಾದಲ್ಲಿ ಮೊದಲ ಶಾಲೆ ತೆರೆದರು. ಒಂದು ವರ್ಷದ ನಂತರ "ಮಿಷಿನರಿ ಆಫ್ ಚಾರಿಟಿ" ಸ್ಥಾಪಿಸಿದರು.

ಲಕ್ಷಾಂತರ ಬಡ ಅನಾಥ ಮಕ್ಕಳ ಉದ್ಧಾರಕ್ಕಾಗಿ ಜೀವನವನ್ನೇ ಮುಡುಪಾಗಿಟ್ಟ ಮದರ್ ತೆರೇಸಾ ಅವರ ನಿಸ್ವಾರ್ಥ ಸೇವೆಗಾಗಿ ಪ್ರಶಸ್ತಿ ಪುರಸ್ಕಾರವೇ ಹರಿದು ಬಂದಿದೆ. 1979ರಲ್ಲಿ ಅತ್ಯುನ್ನತ ನೋಬಲ್ ಶಾಂತಿ ಪ್ರಶಸ್ತಿಯೂ ಅವರಿಗೆ ಸಿಕ್ಕಿದೆ. "ನಾವು ಬಡವರನ್ನು ಪ್ರೀತಿಸುತ್ತೇವೆ ಎಂಬುದು ಅವರಿಗೆ ಅರಿವಾಗಬೇಕು." ಎಂದು ಹೇಳುತ್ತಿದ್ದ ತೆರೇಸಾ ಅವರಿಗೆ 1980ರಲ್ಲಿ ಭಾರತದ ಅತ್ಯುನ್ನತ ನಾಗರಿಕ ಪ್ರಶಸ್ತಿಯಾದ "ಭಾರತ ರತ್ನವೂ" ದೊರೆತಿದೆ. ಕಳೆದ ವರ್ಷ ಅವರಿಗೆ ಅಮೇರಿಕದ ಗೌರವಾನ್ವಿತ ನಾಗರಿಕತ್ವವೂ ಲಭಿಸಿತ್ತು.

ದೇಶದಲ್ಲಿನ ಅನಾಚಾರಗಳ ನಿರ್ಮೂಲನಕ್ಕಾಗಿ ಕುಟುಂಬಗಳಲ್ಲಿ ಪ್ರತಿಯೊಬ್ಬರೂ ಪ್ರಾರ್ಥನೆ ಸಲ್ಲಿಸಬೇಕು. ಇಂದು ನಮ್ಮ ವಿಶ್ವದಲ್ಲಿ ಎಲ್ಲೆಲ್ಲೂ ಅನಾಚಾರ, ಹಗೆ, ಸ್ವಾರ್ಥ, ದರೋಡೆ, ಕೊಲೆ, ಕ್ರೌರ್ಯ ತಾಂಡವವಾಡುತ್ತಿದ್ದು "ನಾವು ಅವಕಾಶ ಕೊಟ್ಟರೆ" ಖಂಡಿತವಾಗಿಯೂ ಅದನ್ನು ಕೊನೆಗಾಣಿಸಬಹುದು ಎಂದಿದ್ದಾರೆ. ವ್ಯಕ್ತಿ ವ್ಯಕ್ತಿಯ ನಡುವಿನ ಪ್ರೀತಿಯ ಸೆಲೆ ಬತ್ತಿರುವುದೇ ಇದಕ್ಕೆ ಕಾರಣ. ಮಾನವೀಯತೆಯ ಪಾಠವನ್ನು ಪುಟ್ಟ ಮಕ್ಕಳಿಂದ ಹಿಡಿದು ಹಿರಿಯರವರೆಗೂ ಕಲಿಸ ಹೊರಟಾಗ ಇದೆಲ್ಲಾ ಕೊನೆಗೊಂಡಿತು. ಇನ್ನೊಬ್ಬರ ಹಿತವೇ ನನ್ನ ಹಿತ ಎಂಬುದನ್ನರಿತು ಪ್ರತಿಯೊಬ್ಬರೂ ವ್ಯವಹರಿಸಬೇಕು. ಕಷ್ಟದಲ್ಲಿದ್ದವರಿಗೆ ಸಹಾಯ ಮಾಡುವಂಥ ಸದ್ಬುದ್ಧಿಯನ್ನು ಬೆಳೆಸಿಕೊಂಡಾಗ ಇನ್ನೊಬ್ಬನನ್ನು ತನ್ನ ಆಪ್ತನಂತೆಯೇ ತಿಳಿದುಕೊಂಡಾಗ ಅನಾಚಾರಗಳೆಲ್ಲಾ ಕ್ಷೀಣಿಸುತ್ತವೆ. ಸದ್ಯದ ಪರಿಸ್ಥಿತಿಯಲ್ಲಿ ಅನ್ಯಾಯದ ಮಾರ್ಗ ತುಳಿಯುತ್ತಿರುವವರಿಗಾಗಿಯೂ ದೇವರಲ್ಲಿ ನಾವು ಪ್ರಾರ್ಥಿಸಬೇಕಾಗಿದೆ. ಅವರ ಹೃದಯ ಪರಿವರ್ತನೆಗಾಗಿ ಪ್ರಾರ್ಥನೆ ಸಲ್ಲಿಸಬೇಕಾಗಿದೆ. ಜಗತ್ತಿಗೆ ನಮ್ಮಿಂದಾಗುವಷ್ಟು ಒಳಿತನ್ನು ಮಾಡಲು ಶ್ರಮಿಸಬೇಕು. ಆಗಲೇ ಆರೋಗ್ಯಕರವಾದ ಸಮಾಜ ನಿರ್ಮಾಣವಾಗುವುದು ಎಂದು ಕರೆ ಇತ್ತಿದ್ದಾರೆ.

ವಿದೇಶದಲ್ಲಿ ಹುಟ್ಟಿದ ಹೆಣ್ಣು ಮಗಳೊಬ್ಬಳು, ಭಾರತಕ್ಕೆ ಬಂದು ನೀಡಿದ ಸೇವೆ, ಸಾಹಸ, ಸಾಧನೆ, ಸಂಪಾದಿಸಿದ ಪ್ರೀತಿ, ಗೌರವಗಳ ಸಂಗೀತವೇ ವಿಶ್ವದ ಜನರ ಹೃದಯಗಳಲ್ಲಿ ಅವರು ಅತ್ಯಪೂರ್ವ ಮಾನವೀಯ ಅಲೆಗಳನೆಬ್ಬಿಸಲು ಸಾಧ್ಯವಾಗಿಸಿದ್ದು.

# ಗಂಗರಸರ ರಾಜಧಾನಿ ತಲಕಾಡು

ಲೇಖಕರು : ಟಿ. ಆರ್. ಮುದ್ದೆಗೌಡ
ತಲಕಾಡು

ಒಕ್ಕಲಿಗರ ಜನಾಂಗದ ಒಳ ಬಣಗಳಲ್ಲಿ ಒಂದಾದ ಬಲ್ಲಾಳ, ವೆಲ್ಲಾಳ, ಹಾಗೂ ಬೆಳಕೊಡು, ಒಕ್ಕಲಿಗರ ಸಂತತಿಗೆ ಸೇರಿದವರು. ಇವರ ವಂಶಸ್ತರು ಈಗಲೂ ಕೋಟೆ ಕೊತ್ತಲೆಗಳಲ್ಲಿ ವಾಸಿಸುತ್ತಾ ತಮ್ಮ ನಿಜ ಅಸ್ತಿತ್ವವನ್ನು ಕಳೆದುಕೊಂಡು ತಮ್ಮ ಮೂಲ ಕಸುಬಾದ ಒಕ್ಕಲುತನವನ್ನು ಮುಂದುವರಿಸಿಕೊಂಡು ಬರುತ್ತಿರುತ್ತಾರೆ.

ಇವರ ಮೂಲ ಪುರುಷರುಗಳಾದ ಕೊಂಗಣ ವರ್ಮ ಹಾಗೂ ಥಡಿಗ, ಮಾಧವರನ್ನು ಈಗಲೂ ಈ ಜನಾಂಗವು ತಮ್ಮ ನೆನಪಿನಲ್ಲಿ ಉಳಿಸಿಕೊಂಡಿದ್ದಾರೆ.



ಅಭಿನವ ವಿವೇಕಾನಂದ, ಜಗದ್ಗುರು
**ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ**
ಮಹಾಸ್ವಾಮಿಗಳ ಪಾದಾರವಿಂದಗಳಿಗೆ
ಲೇಖಕರು ಇದನ್ನು ಅರ್ಪಿಸಿದ್ದಾರೆ.

ಇವರ ಇತಿಹಾಸವು ಪೂರ್ವ ಕಾಲದಿಂದಲೂ ಇದೆ. ಆದರೆ ಈಗ ಇವರ ಸ್ಥಿತಿಗತಿಗಳನ್ನು ಒಳಹೊಕ್ಕಿ ನೋಡಿದಾಗ ಈ ವಂಶಸ್ತರು ನಶಿಸಿ ಹೋಗುವ ಸ್ಥಿತಿಯಲ್ಲಿದ್ದಾರೆಂದು ವ್ಯಥೆವಾಗಿ ಹೇಳಬಹುದು. ಹಾಗೂ ಈ ಜನಾಂಗವು ಜೀವಂತವಾಗಿ ಶಾಸನಗಳಲ್ಲಿ ಮಾತ್ರ ಉಲ್ಲೇಖಿತರಾಗಿ ಭಾಗಶಃ ಉಳಿದಿದ್ದಾರೆ. ಯಾವ ಇತಿಹಾಸಕಾರರೂ ಇವರ ಬಗ್ಗೆ ಸರಿಯಾದ ಚಿಂತನೆ ಮಾಡಿ ಮಾಹಿತಿಯನ್ನು ಹೊರಕ್ಕೆ ಪ್ರಚುರಪಡಿಸಿಲ್ಲವೆಂಬುದು ಅತ್ಯಂತ ಶೋಚನೀಯವಾದ ವಿಚಾರವಾಗಿದೆ.

[ಮುಂದುವರಿಯುವುದು]

# ಜಿಪ್ಸೀಯರು ಎಲ್ಲಿಂದ ಬಂದರು ?

ಜಿಪ್ಸೀಯರು ಒಂದು ಬಗೆಯ ಅಲೆಮಾರಿ **(Nomads)** ಜನ. ಅವರು ಕುದುರೆ ಗಾಡಿಗಳಲ್ಲಿ ಅಥವಾ ಎತ್ತಿನ ಗಾಡಿಗಳಲ್ಲಿ ಗುಂಪು–ಗುಂಪಾಗಿ, ಸ್ಥಳದಿಂದ ಸ್ಥಳಕ್ಕೆ ಪ್ರಯಾಣ ಮಾಡುತ್ತಾರೆ. ಅವರಿಗೆ ಯಾವುದೇ ರಾಷ್ಟ್ರೀಯತೆ ಇರುವುದಿಲ್ಲ. ಒಂದೇ ಜಾಗದಲ್ಲಿ ಅವರು ಸ್ಥಿರವಾಗಿ ನೆಲೆಸುವುದಿಲ್ಲ. ಅವರನ್ನು ಪ್ರಪಂಚದಲ್ಲಿ ಎಲ್ಲೆಲ್ಲೂ ಕಾಣಬಹುದು.

ಅವರ ಮೂಲದ ಬಗ್ಗೆ ಯಾರಿಗೂ ಏನೂ ಗೊತ್ತಿಲ್ಲ. ಆದರೆ ಈ ಜನ ಭಾರತದಿಂದ ಬಂದರೆಂಬ ನಂಬಿಕೆ ಇದೆ. ಈ ಅಲೆಮಾರಿಗಳು 10ನೇ ಶತಮಾನದಿಂದಲೂ ಇದ್ದಾರೆಂದು ಹೇಳಲಾಗಿದೆ. ಆಗ ಕೆಲವು ಗುಂಪುಗಳ ಜನರು ಭಾರತದಿಂದ ಪರ್ಶಿಯಾಗೆ ವಲಸೆ ಹೋದರು. ಅಲ್ಲಿ ಎರಡು ಗುಂಪುಗಳಾದರು. ಈ ಗುಂಪುಗಳಲ್ಲಿ ಒಂದು ಈಜಿಪ್ಟ್ ಮತ್ತು ಉತ್ತರಾ ಆಫ್ರಿಕಾ ಹಾಗೂ ದಕ್ಷಿಣ ಮತ್ತು ಪಶ್ಚಿಮದತ್ತ ಹೋಯಿತು.

ಈ ಅಲೆಮಾರಿಗಳು 15 ಮತ್ತು 16ನೇ ಶತಮಾನಗಳಲ್ಲಿ ಯೂರೋಪ್‌ನ ಭಾಗವನ್ನು ಮುಟ್ಟಿದರು. ಇವರು ಈಜಿಪ್ಟ್‌ನಿಂದ ಬಂದರೆಂದು ಇಂಗ್ಲೀಷರು ನಂಬಿದ್ದರು. ಆದ್ದರಿಂದ ಅವರನ್ನು ಇಂಗ್ಲೀಷರು ಜಿಪ್ಸೀ **(Gypsie)** ಎಂದು ಕರೆಯತೊಡಗಿದರು. 'ಜಿಪ್ಸೀ' ಎಂಬ ಶಬ್ದ 'ಈಜಿಪ್ಟ್' ಎಂಬ ಶಬ್ದದಿಂದ ಬಂದಿದೆ. ಅನಂತರ ಈ ಜನರು ಜರ್ಮನಿ, ಫ್ರಾನ್ಸ್, ಸ್ಪೆಯಿನ್, ಸ್ವೀಡನ್ ಮತ್ತು ಫಿನ್ಲೆಂಡ್‌ಗೆ ಪ್ರಯಾಣ ಮಾಡಿದರು.

ಜಿಪ್ಸೀ 'ರೊಮನಿ' **(Romany)** ಎಂಬ ಭಾಷೆಯಲ್ಲಿ ಮಾತನಾಡುತ್ತಾರೆ. ಈ ಭಾಷೆ ಸಂಸ್ಕೃತವನ್ನು ಹೋಲುತ್ತದೆ. ಅನೇಕ ಶತಮಾನಗಳಿಂದ ಅವರು ಅಲೆದಾಡುತ್ತಿರುವ ಕಾರಣ, ಅವರು ಯಾವ ಯಾವ ದೇಶಕ್ಕೆ ಹೋಗಿದ್ದರೋ ಆ ದೇಶಗಳ ಭಾಷೆಗಳಿಂದ ಪಡೆದುಕೊಂಡ ಶಬ್ದ. ಇವರ ವಿಚಿತ್ರ ಸ್ವಭಾವವುಳ್ಳ ಈ ಜನರನ್ನು ಕಂಡರೆ ಯಾರಿಗೂ ಆಗದು. ಅವರನ್ನು ನೋಡಿ ಭಯಪಡುವುದೂ ಉಂಟು.

ಜೀವನೋಪಾಯಕ್ಕಾಗಿ ಜಿಪ್ಸಿಯರು ನಾನಾ ಉದ್ಯೋಗಗಳನ್ನು ಮಾಡುತ್ತಾರೆ. ಅವರಲ್ಲಿ ಕೆಲವರು ಮರದಲ್ಲಿ ಕೆತ್ತನೆ ಕೆಲಸ ಮಾಡುವರು. ಕೆಲವರು ಪಾತ್ರೆಗಳನ್ನು ಮಾಡುತ್ತಾರೆ. ಇಂಗ್ಲೆಂಡ್‌ನಲ್ಲಿರುವ ಜಿಪ್ಸಿಯರು ಕುದುರೆ ವ್ಯಾಪಾರ ಮಾಡುತ್ತಾರೆ. ಅವರಲ್ಲಿ ಹಾಡು ಹೇಳುವವರು ಮತ್ತು ಪಿಟೀಲು ವಾದಕರು ಸಹ ಇದ್ದಾರೆ. ಸ್ಪೆಯಿನ್‌ನ ಜಿಪ್ಸೀ, ಫ್ಲೆಮೆಂಕೊ ನೃತ್ಯಕ್ಕೆ ಪ್ರಸಿದ್ಧರಾಗಿದ್ದಾರೆ. ಯುಗೋಸ್ಲಾವಿಯಾದ ಜಿಪ್ಸೀಯರು ಗನ್‌ಪೌಡರ್ ತಯಾರಿಕೆಯಲ್ಲಿ ಹುಷಾರು. ಅನೇಕ ಜಿಪ್ಸೀ ಮಹಿಳೆಯರು ಹಣಗಳಿಸುವುದಕ್ಕಾಗಿ ಜಾದೂ ವಿದ್ಯೆಯನ್ನು ಪ್ರದರ್ಶಿಸುವರು. ಕೆಲವರು ಭಿಕ್ಷೆ ಬೇಡುವರು ಅಥವಾ ಮನೋರಂಜನೆ ಮಾಡುವರು. ಆದ್ದರಿಂದ ಜಿಪ್ಸೀಯಲ್ಲಿ ಗಂಡಸರಿಗಿಂತ, ಹೆಂಗಸರ ಸಂಪಾದನೆ ಹೆಚ್ಚು.

● **ಗುಡ್ಡೀರ ವನಮಾಲ,** ಮೈಸೂರು.

# ಆಧುನಿಕ ಸಮಾಜದಲ್ಲಿ ಶಿಕ್ಷಕರ ಪಾತ್ರ

ಪ್ರಸ್ತುತ ಪ್ರಪಂಚದಲ್ಲಿ ಪರಿವರ್ತನೆಯನ್ನು ಉಂಟುಮಾಡಲು ಹಾಗೂ ಸಾಮಾಜಿಕ ಅಂಶಗಳನ್ನು ಸೃಷ್ಟಿ ಮಾಡಬಲ್ಲ ಅತ್ಯಂತ ಪರಿಣಾಮಕಾರಿಯಾದ ಆಯುಧ ಅಥವಾ ಮಾರ್ಗ ಎಂಬುದು ಹೆಚ್ಚು ಅರ್ಥಮಯ !

ಒಂದು ದೇಶದ ಪ್ರಗತಿ ಮತ್ತು ಜನರ ಜೀವನ ಮಟ್ಟ ಶಾಲೆಯಲ್ಲಿ ನೀಡುತ್ತಿರುವ ಶಿಕ್ಷಣದ ಗುಣಮಟ್ಟ ಮತ್ತು ರಾಷ್ಟ್ರದಲ್ಲಿರುವ ಶಿಕ್ಷಣದ ಕ್ರಮವನ್ನು ಆಧರಿಸಿದೆ. ಸ್ವಾಮಿ ವಿವೇಕಾನಂದರವರು ನಿಮ್ಮ

ಬಿ. ಸಿದ್ಧರಾಜು, ಮಡೆ

ರಾಷ್ಟ್ರಕ್ಕೆ "ಉತ್ತಮ ಮಾನವರು ಬೇಕಾದರೆ ಉತ್ತಮ ಶಿಕ್ಷಕರನ್ನು ಹುಡುಕಿಕೊಳ್ಳಿ" ಎಂದಿದ್ದಾರೆ. ಹೀಗೆಂದರೆ "ರಾಷ್ಟ್ರದ ಶಿಕ್ಷಕರಂತೆ ರಾಷ್ಟ್ರವಿರುವುದು" ಎಂಬ ಮಾತು ಅರ್ಥಪೂರ್ಣವಾಗಿದೆ. ಪರಿವರ್ತನೆಯಾಗುತ್ತಿರುವ ಸನ್ನಿವೇಶದಲ್ಲಿ ಶಾಶ್ವತವಾದ ಮಾನವೀಯ ಮೌಲ್ಯಗಳು ಮತ್ತು ಆದರ್ಶಗಳನ್ನು ಉಳಿಸಿಕೊಂಡು ನಮ್ಮ ದೇಶಕ್ಕೆ ಹೊಂದಿಕೆಯಾಗುವ ಶೈಕ್ಷಣಿಕ ಜ್ಞಾನವನ್ನು ಬಳಸಿಕೊಂಡು ಶಿಕ್ಷಣ ಕ್ಷೇತ್ರದಲ್ಲಿ ಕ್ರಾಂತಿಕಾರಿಯಾದ ಅರ್ಥಗರ್ಭಿತ ಶಿಕ್ಷಣ ಅಭೂತಪೂರ್ವವಾದದ್ದು.

ಶಿಕ್ಷಕನ ಸ್ಥಾನಮಾನಗಳು ದಿನ ಉರುಳಿದಂತೆ ಬದಲಾಗುತ್ತ ಆಧುನಿಕ ಯುಗದಲ್ಲಿ ಒಂದು ವೃತ್ತಿಯಾಗಿ ಪರಿಣಮಿಸಿದೆ. ಸಂಸ್ಕೃತಿ ಮತ್ತು ಆಚಾರಗಳು ಬದಲಾದಂತೆ ಅದರ ಪ್ರಭಾವವು ಶಿಕ್ಷಕನ ಮೇಲೆ ಮೊದಲು ಬೆಳಕು ಬೀರುತ್ತದೆ. ಇಂದಿನ ಮುಂದುವರಿಯುತ್ತಿರುವ ಜಗತ್ತಿನಲ್ಲಿ ವಿದ್ಯಾರ್ಥಿಗಳನ್ನು ಅತ್ಯದ್ಭುತ ಪ್ರಪಂಚಕ್ಕೆ ಕೊಂಡೊಯ್ಯಬೇಕಾಗಿರುವುದರಿಂದ ಸಮಾಜ ಶಿಕ್ಷಕರಿಂದ ಹೆಚ್ಚಿನದನ್ನು ಅಪೇಕ್ಷಿಸುತ್ತಿದೆ. ಪ್ರಾಚೀನ ಕಾಲದಲ್ಲಿ ಗುರುಕುಲದಲ್ಲಿ ಗುರುವಿನ ಸ್ಥಾನವು ಘನತೆಯ ಗೋಪುರವಾಗಿತ್ತಲ್ಲವೆ ? "ಗು" ಎಂದರೆ ಮೌಢ್ಯ ಎಂತಲು "ರು" ಎಂದರೆ ದೂರ ಮಾಡುವವನೆಂತಲೂ ಅರ್ಥ. ಅಂದರೆ ಪ್ರತಿಯೊಬ್ಬ ಮಾನವನಲ್ಲಿ ಅಡಕವಾಗಿರುವ ಕತ್ತಲನ್ನು ಹೋಗಲಾಡಿಸಿ ಬೆಳಕಿನತ್ತ ಕೊಂಡೊಯ್ಯುವ ಕಾರ್ಯ ಗುರುವಿನದು ಆದ್ದರಿಂದಲೆ "ತಮಸೋಮ ಜೋತಿರ್ಗಮಯ" ಎಂದು ಹೇಳಿರುವುದು. "ಗುರು ಬ್ರಹ್ಮ ಗುರುವಿಷ್ಣು ಗುರುದೇವೋ ಮಹೇಶ್ವರ, ಗುರು ಸಾಕ್ಷಾತ್ ಪರಬ್ರಹ್ಮ ತಸ್ಮೈ ಶ್ರೀ ಗುರುವೇ ನಮಃ" ಅನ್ನುವ ವೇದ ಉಪನಿಷತ್ತುಗಳು ಗುರುವಿನ ಸ್ಥಾನವನ್ನು ಮನವರಿಕೆ ಮಾಡಿಕೊಟ್ಟಿದೆ. ಡಾ. ರಾಧಾಕೃಷ್ಣರವರು "ಶಿಕ್ಷಕ ದೇಶದ ಭವಿಷ್ಯದ ಮಾರ್ಗದರ್ಶಿ" ಎಂದಿದ್ದಾರೆ. ಶಿಕ್ಷಣವು ಜ್ಞಾನದ ಕಣ್ಣು ತೆರೆಸಿ ವಿಚಾರ ವಿವೇಕದ ಕಡೆಗೆ ಹೊಯ್ಯುವ ಸಾಧನ. ಮಕ್ಕಳಲ್ಲಿ ರಾಷ್ಟ್ರಪ್ರೇಮ ಕೋಮು ಸೌಹಾರ್ದತೆಯನ್ನೊಳಗೊಂಡ ಮೌಲ್ಯ ಆಧಾರಿತ ಶಿಕ್ಷಣ ನೀಡುವಲ್ಲಿ ಶಿಕ್ಷಕ ಮಾದರಿಯಾಗಿದ್ದುಕೊಂಡು ರಾಷ್ಟ್ರದ ಹಿತ ಶಕ್ತಿಗಾಗಿ ತನ್ನನ್ನು ತಾನೆ ಸಂಪೂರ್ಣವಾಗಿ ತ್ಯಾಗ ಮಾಡಿಕೊಳ್ಳಲು ಸಿದ್ಧನಾಗಿದ್ದಾಗ "ಶಿಕ್ಷಕ ರಾಷ್ಟ್ರಶಿಲ್ಪಿ" "ಮಾನವ ನಿರ್ಮಾಪಕ", "ಇತಿಹಾಸ ಸೃಷ್ಟಿಕರ್ತ" ಎಂಬ ಅನೇಕ ಮಹನೀಯರ ಹೆಸರಿಗೆ ಗೌರವ ಬರುತ್ತದೆ. ಸ್ವಾಮಿ ವಿವೇಕಾನಂದರು ಶಿಕ್ಷಕನು ವಿದ್ಯಾರ್ಥಿಗಳ ಮಟ್ಟಕ್ಕೆ ಬಂದು ತನ್ನ ಆತ್ಮವನ್ನು ವಿದ್ಯಾರ್ಥಿಗಳ ಆತ್ಮದ ಜೊತೆ ಹೊಂದಾಣಿಕೆ ಮಾಡಿಕೊಳ್ಳಬೇಕು ಎಂದು ಹೇಳಿದ್ದಾರೆ. ಪ್ರತಿ ವಿದ್ಯಾರ್ಥಿಯ ಆಸಕ್ತಿಗನುಗುಣವಾಗಿ ವಿಷಯ ಕಲಿಕೆಗೆ ಶಿಕ್ಷಕನ ಪ್ರೋತ್ಸಾಹ ಅಗತ್ಯ. ಮಕ್ಕಳು ಮಣ್ಣಿನ ಮುದ್ದೆಯಂತಿದ್ದು ಕುಂಬಾರ ರೂಪಿಸಿದ ಆಕಾರಕ್ಕೆ ರೂಪುಗೊಳ್ಳುತ್ತದೆ. ಆದ್ದರಿಂದ ಮಕ್ಕಳ ರಚನೆಯಲ್ಲಿ ಶಿಕ್ಷಕನೇ ಶಿಲ್ಪಿಯಾದ್ದರಿಂದ ಶೀಲವಂತ ಶಿಕ್ಷಕನ ಮಹತ್ವಪೂರ್ಣ ಪ್ರಭಾವ ಮುಖ್ಯ.

ಒಟ್ಟಿನಲ್ಲಿ ವಿದ್ಯಾರ್ಥಿಗಳಲ್ಲಿ ಸರ್ವತೋಮುಖ ಬೆಳವಣಿಗೆಯನ್ನು ಮೂಡಿಸಲು ಶಿಕ್ಷಕ ತನ್ನೊಳಗಿನ ಮತ್ತು ಬಾಹ್ಯ ಗುಣಗಳ ಕಡೆ ಗಮನವಿಡಬೇಕು. ಕಾರಣ ಮಕ್ಕಳು ಶಿಕ್ಷಕನ ನಡೆ ನುಡಿಗಳನ್ನು ಮೌಲ್ಯಮಾಪನ ಮಾಡುತ್ತಲೇ ಇರುತ್ತಾರೆ. ಮಕ್ಕಳ ಮನಸ್ಸನ್ನು ಪ್ರವೇಶಿಸಿ ಅವರಲ್ಲಿ ಹೊಸತನ ಮೂಡಿಸುವಲ್ಲಿ ಶಿಕ್ಷಕನ ಪಾತ್ರ ಅನುಪಮ್ಯವಾದದ್ದು. ಶೈಕ್ಷಣಿಕ ಗುರಿ ಸಾಧನೆಗೆ ಶಿಕ್ಷಕನು ಪೈಹಿಕ, ಮಾನಸಿಕ, ಬೌದ್ಧಿಕ ಸಮತೋಲನವನ್ನು ಕಾಯ್ದುಕೊಳ್ಳುತ್ತವೆ. ಕೀಳು ಜನಪ್ರಿಯತೆಗಾಗಿ ತನ್ನ ಸ್ವಾಭಿಮಾನವನ್ನು ಗಾಳಿಗೆ ತೂರದೆ ನಿಸ್ವಾರ್ಥ ಬುದ್ಧಿಯಿಂದ ಫಲಾಪೇಕ್ಷೆವಿಲ್ಲದೆ ತನ್ನ ವೃತ್ತಿಯಲ್ಲಿ ಶ್ರಮಿಸುತ್ತಾನೆ. ಆತ್ಮವಿಶ್ವಾಸವಿಲ್ಲದವನು ತಾನು ಬೋಧಿಸುವುದಕ್ಕಿಂತ ಮಿಗಿಲಾಗಿ ಶಾಲಾವಾತಾವರಣದಲ್ಲಿ ಅನೇಕ ಸಮಸ್ಯೆಗಳನ್ನು ಸೃಷ್ಟಿಸುತ್ತಾನೆ. ಶಿಕ್ಷಕನು ವಿದ್ಯಾರ್ಥಿಗಳನ್ನು ಪ್ರೇರೇಪಿಸುವುದರೊಂದಿಗೆ ಉತ್ತಮ ಸನ್ನಿವೇಶವನ್ನು ಉಂಟು ಮಾಡಿ ಅವರಲ್ಲಿ ಇರುವ ಪ್ರತಿಭೆಯನ್ನು ಹೊರಹೊಮ್ಮಿಸುತ್ತಾನೆ. ಜೊತೆಗೆ ಜಟಿಲ ಸಂಪ್ರದಾಯಕ್ಕೆ ಹೊಂದಿಕೊಂಡಿರದೆ ಉರುಳುತ್ತಿರುವ ಪರಿಸ್ಥಿತಿಗೆ ಅನುಸಾರವಾಗಿ ಪಾಠ–ಪ್ರವಚನದಲ್ಲಿ ಆಸಕ್ತಿ, ಸತತ ತಯಾರಿ, ಯಾವಾಗಲು ತಿಳಿಯಬೇಕೆಂಬ ಹಂಬಲ, ಹೊಸ ಗ್ರಂಥಗಳ ಅಧ್ಯಯನ, ಜ್ಞಾನಿಗಳೊಡನೆ ಬೆರೆತು ತಿಳಿದುಕೊಳ್ಳುವ

ಕುತೂಹಲ, ಸಂಸ್ಥೆಯ ಮುಖ್ಯಸ್ಥರ ಬಗ್ಗೆ ಗೌರವ, ಸಹೋದ್ಯೋಗಿಗಳೊಡನೆ ಸಾಮರಸ್ಯ ಭಾವನೆ, ವಿದ್ಯಾರ್ಥಿಗಳ ಮೇಲೆ ಒಲವು, ಪೋಷಕರ ಜೊತೆ ಸೌಹಾರ್ದಯುತ ಸಂಬಂಧ, ಸಾಮಾಜಿಕ ಮತ್ತು ಶೈಕ್ಷಣಿಕ ಚಟುವಟಿಕೆಗಳಲ್ಲಿ ಭಾಗವಹಿಸುತ್ತವೆ. ತನ್ನ ವೃತ್ತಿಯಲ್ಲಿ ಹೆಚ್ಚಿನ ಪರಿಣತಿ ಮತ್ತು ದಕ್ಷತೆಯನ್ನು ಪಡೆಯುತ್ತಾರೆ. ಇಂತಹ ಶಿಕ್ಷಕ ಗೌರವ ಸ್ಥಾನದಲ್ಲಿರುತ್ತಾನೆ.

ಇಂದಿನ ಯುಗದಲ್ಲಿ ಮಕ್ಕಳು ತುಂಬ ಮುಂದುವರಿದಿರುತ್ತಾರೆ. ಅನೇಕ ಸಮೂಹ ಮಾಧ್ಯಮಗಳಿಂದ ಪ್ರಭಾವಿತರಾಗಿರುತ್ತಾರೆ. ಶಿಕ್ಷಕ ತಾನು ಕಲಿಯುವುದರೊಂದಿಗೆ ವಿದ್ಯಾರ್ಥಿಗಳಿಂದ ಮತ್ತು ಅವರಿಗಾಗಿ ಹೊಸದನ್ನು ಪತ್ತೆ ಹಚ್ಚುವ ಜ್ಞಾನ ಸಾಗರದಲ್ಲಿ ಮುಳುಗಿ ಸಮಾಜವನ್ನು ನಿರ್ಮಿಸುವ ಸಾಧ್ಯತೆ ಇದೆ.ಶ್ರೇಷ್ಠ ಮಟ್ಟದ ಉತ್ತಮ ಶಿಕ್ಷಕ ತನ್ನ ತಪ್ಪುಗಳನ್ನು ಸ್ನೇಹಭಾವದಿಂದ ಒಪ್ಪಿಕೊಂಡು ಕಾಲ ಪ್ರಜ್ಞೆಯುಳ್ಳವನಾಗಿ ಸರಳ ಸ್ವಭಾವದಿಂದ ಮಕ್ಕಳ ಮನಸ್ಸಿನಲ್ಲಿ ಒಳ್ಳೆಯ ಭಾವನೆ ಶಿಸ್ತುಗಳನ್ನು ಮೂಡಿಸಲು ಸಾಧ್ಯ. ನಿರ್ಮಲ ಚಿತ್ತದಿಂದ ಸದ್ಗುಣ ಸಂಪನ್ನನಾಗಿ ದುಡಿವಾಗ ಭಾರತದ ಸಂವಿಧಾನದಲ್ಲಿ ಹೇಳಿರುವಂತೆ ಕಡ್ಡಾಯ ಹಾಗೂ ಪ್ರಾಥಮಿಕ ಶಿಕ್ಷಣದ ಹಲವಾರು ರಾಷ್ಟ್ರೀಯ ಗುರಿಗಳ ಸಾಧನೆಯ ಕನಸು ನನಸಾಗುವುದರ ಜೊತೆಯಲ್ಲಿ ಶಿಕ್ಷಕನ ಬದುಕು ಸಾರ್ಥಕವಾಗುತ್ತದೆ. ●

## ಪದಗಳ ಹೋಲಿಕೆ

ಕುತೂಹಲಕ್ಕೆಂದು ಇಂಗ್ಲೀಷ್ ಭಾಷೆ ಮತ್ತು ಭಾರತೀಯ ಭಾಷೆಯಲ್ಲಿಯ ಉಚ್ಚಾರದಲ್ಲಿ (Phonetic) ಏನಾದರೂ ಸಾಮ್ಯತೆ ಇದೆಯೇ ಎಂದು ನೋಡುತ್ತಾ ಹೋದಾಗ ಆಶ್ಚರ್ಯ ಹುಟ್ಟಿಸುವಷ್ಟು ಹೋಲಿಕೆ ಬಹಳಷ್ಟು ಪದಗಳಲ್ಲಿ ಕಂಡು ಬಂತು. ಕೆಲವೊಂದು ಪದಗಳನ್ನು ನಿಮ್ಮ ಮುಂದೆ ಇಡುತ್ತಿದ್ದೇನೆ.

Prayer—ಪ್ರಾರ್ಥನೆ (ಕನ್ನಡ
Dental—ದಂತ ,,
Cruel—ಕ್ರೂರ ,,
Septa—ಸಪ್ತಾಹ ,,
Cough—ಕಫ ,,
Carve—ಕೊರೆಯು ,,
Decimal—ದಶಮಾಂಶ ,,
One—ಒಂದು ,,
Tri—ತ್ರಿ ,,
Nine—ನವ ,,
Lakh—ಲಕ್ಷ ,,
Receipt—ರಶೀಧಿ ,,
Payment—ಪಾವತಿ ,,
Chit—ಚೀಟಿ ,,
Monkey—ಮಂಗ ,,
Canal—ನಾಲಾ ,,
Joint—ಜಂಟಿ ,,
Ghat—ಘಟ್ಟ ,,
Cheetah—ಚಿರತೆ ,,

No—ನ (ಹಿಂದಿ)
Eight—ಆಟ್ ,,
Name—ನಾಮ್ ,,
Salute—ಸಲಾಮ್ ,,
Upper—ಉಪರ್ ,,

Like—ಲಾಯಕ (ಅರೆಗನ್ನಡ)
Hit—ಹೆಟ್ಟು ,,

ಈ ಹೋಲಿಕೆಗಳನ್ನು ಗಮನಿಸಿದರೆ ಇಂಗ್ಲೀಷ್ ಮತ್ತು ಭಾರತೀಯ ಭಾಷೆಗಳು ಸಂಸ್ಕೃತದಿಂದ ಹೊರಹೊಮ್ಮಿದ ಭಾಷೆಗಳೆಂದು ತಿಳಿದು ಬರುತ್ತದೆ. ಅಲ್ಲದೆ ಒಂದಾನೊಂದು ಕಾಲದಲ್ಲಿ ಬಹುಶಃ ಒಂದೇ ಭಾಷೆ (ಕೆಲವೊಂದು ಬದಲಾವಣೆಗಳೊಂದಿಗೆ) ಮಾತನಾಡುತ್ತಿದ್ದರೋ ಏನೋ ?

ಈ ವಿಷಯವನ್ನು ನಮ್ಮ ಜನಾಂಗದ ಯಾರಾದರೂ ಭಾಷಾ ಪಾಂಡಿತ್ಯರು ಕೈಗೆತ್ತಿಕೊಂಡು ದೀರ್ಘ ಸಂಶೋಧನೆಗೆ ಒಳಪಡಿಸಿದಲ್ಲಿ ನಮ್ಮ ಜನಾಂಗ ಹೆಮ್ಮೆ ಪಡುವಂತ ಕಾರ್ಯ ಸಾಧಿಸಲು ಅವಕಾಶಗಳು ಇದೆಯೆಂದು ನನ್ನ ಅನಿಸಿಕೆ.

● **ಉಳುವಾರನ ತಿಮ್ಮಯ್ಯ ಸುರೇಶ್‌ಕುಮಾರ್,**
ನಿಪ್ಪಾಣಿ.

## : ನುಡಿ ಮುತ್ತು :

○ ಸೌಂದರ್ಯ ದೈವ ಪ್ರಸಾದ –ಅರಿಸ್ಟಾಟಲ್

○ ನಾವು ಸಿಟ್ಟನ್ನು ಗೆದ್ದರೆ ವಿನಯ ತಾನಾಗಿ ಬರುತ್ತದೆ. –ಮಹಾವೀರ

● ಸಂಗ್ರಹ : **ಬಬೀತಾ ರಾಮೇಗೌಡ**

# ಗೌಡರ ವಿವಾಹ ಪದ್ಧತಿ

[ಹಿಂದಿನ ಸಂಚಿಕೆಯಿಂದ]

**ಹಾಲು ತುಪ್ಪ ಶಾಸ್ತ್ರ :**

ಒಂದು ಕಂಚಿನ ಬಟ್ಟಲಿನಲ್ಲಿ ಹಾಲು ಹಾಕಿ ಅದಕ್ಕೆ ಒಂದೆರಡು ಚಮಚೆ ತುಪ್ಪ ಹಾಕಿ ಎದುರಿನಲ್ಲಿ ಒಂದು ಮಣೆಯ ಮೇಲೆ ಬಟ್ಟಲನ್ನು ಇಟ್ಟು ಒಂದು ಚೆಂಬು ನೀರನ್ನು ಇಟ್ಟು ವರನ/ವಧುವಿನ ಬಲಕೈಯನ್ನು ಮೊದಲು ನೀರಿಗೆ ಮುಳುಗಿಸಿ ನಂತರ ಹಾಲಿನ ಬಟ್ಟಲಿಗೆ ಮುಳುಗಿಸಿ ಹೀಗೆ ಮೂರು ಬಾರಿ 3/5 ಮುತ್ತೈದೆಯರು ಶಾಸ್ತ್ರ ಮಾಡಿದ ನಂತರ ಮುಕ್ತಾಯವಾಯಿತು.

**ಬಳೆ ತೊಡಿಸುವ ಕ್ರಮ :**

ಮುಹೂರ್ತದ ಮೊದಲ ದಿನ ಅಂದರೆ ಚಪ್ಪರದ ದಿನ ಹೆಣ್ಣಿನ ಸ್ನಾನ,ಗಂಗೆ ಪೂಜೆ ಕಳೆದ ನಂತರ ಮದುರಂಗಿ ಶಾಸ್ತ್ರಕ್ಕೆ ಮುಂಚಿತವಾಗಿ ಬಳೆ ತೊಡಿಸುವ ಕ್ರಮವಿದೆ. ಇದು ಕೂಡಾ ಒಂದು ಶಾಸ್ತ್ರವೆ. ಬಳೆಗಾರ್ತಿ ಚಪ್ಪರದ ಅಡಿಯಲ್ಲಿ (ಬಳೆಗಾರ್ತಿಯನ್ನು ಮೊದಲೇ ಆಮಂತ್ರಿಸಿರಬೇಕು) ಹಸಿರು ಮತ್ತು ಕೆಂಪು ಬಳೆಗಳನ್ನು ಮದುವಳಿಗೆಯ ಕೈಗೆ ತೊಡಿಸುವಳು. ಅಲ್ಲದೆ ಅಲ್ಲಿ ಸೇರಿದ ಎಲ್ಲಾ ಇಷ್ಟಪಟ್ಟ ಹೆಣ್ಣು ಮಕ್ಕಳ ಕೈಗೂ ಬಳೆ ತೊಡಿಸುವರು. ಮುಂದೆ ಮದುರಂಗಿ ಶಾಸ್ತ್ರ ನಡೆಯುತ್ತದೆ. [ಕನ್ಯೆಯ ಮನೆಯಲ್ಲಿ ಮಾತ್ರ].

ಕೃಪೆ :
**ಗೌಡ ಸಂಸ್ಕೃತಿ ಕೈಪಿಡಿ**

**ಮದುರಂಗಿ ಶಾಸ್ತ್ರ :**

ಮದುರಂಗಿ ಮರದ ಎಲೆಯೊಂದಿಗೆ ಎಲೆ ಅಡಿಕೆ ಬೆರೆಸಿ, ಚೆನ್ನಾಗಿ ಅರೆದು ಬೇಕಾದ ಬಣ್ಣ ಬರುವಂತೆ ಮಾಡಿ ಕೈಗಳನ್ನು ಅಲಂಕರಿಸುವುದಕ್ಕಾಗಿ ಮಾಡುವುದು. ಆದರೆ ಇದು ಮದುವೆಯಾಗುವುದಕ್ಕೆ ಮುನ್ನ ಗಂಡು ತನ್ನ ಬಲಗೈಗೂ, ಹೆಣ್ಣು ಎಡಗೈಗೂ ಮದುರಂಗಿ ಇಡುವಂತಿಲ್ಲ ಎಂದು ಹಿರಿಯರ ಕಾಲದಿಂದಲೂ ನಡೆದು ಬಂದಿರುವುದು. ಮದುರಂಗಿ ಇಡುವಾಗ ವರನ/ವಧುವಿನ ಉಡುಪಿಗೆ ತಗಲದಂತೆ ಇಟ್ಟು ಅದು ಹಿಡಿಯುವವರೆಗೆ 2 ಕೈಯನ್ನು ಜೋಡಿಸಿ ಬಟ್ಟೆಯಿಂದ ಕಟ್ಟುವುದು. ಇದು ವಧು ಮಕ್ಕಳ ಬಟ್ಟೆ ಬರೆ ಕೆಡದೆ ಹಾಳಾಗದಿರಲಿ ಎಂದು ಒಂದಾದರೆ, ಇನ್ನೊಂದು ಒಂದು ಕೈಗೆ ಮದುರಂಗಿಯನ್ನು ನಾಜೂಕಾಗಿ ಇಟ್ಟಲ್ಲಿ ಅದುವೇ ಇನ್ನೊಂದು ಕೈಗೂ ಹಿಡಿಸುವುದಕ್ಕೆ ಸುಲಭ ಉಪಾಯವಾಗಿದೆ.

**ಅಕ್ಕಿ ಮುಹೂರ್ತ (ಶೇಶೋಪಚಾರ):**

ಶಾಸ್ತ್ರಗಳೆಲ್ಲವೂ ಹೆಚ್ಚಿನ ಭಾಗ ರಾತ್ರಿಯೇ ಕಳೆದಿರುತ್ತದೆ. ವರ/ವಧುವಿನ ಮನೆಯಲ್ಲಿ ಒಬ್ಬೊಬ್ಬರಾಗಿಯೇ ಅಕ್ಕಿ ಮುಹೂರ್ತವನ್ನು ಮಾಡುವಂತಿದ್ದರೆ, ಮರುದಿನ ಬೆಳಿಗ್ಗೆ ಮುಹೂರ್ತವನ್ನು ಮಾಡುವಂತಿದ್ದರೆ, ಮರುದಿನ ಬೆಳಿಗ್ಗೆ ಎಲ್ಲರ ಉಪಹಾರದ ನಂತರ ನಿಶ್ಚೈಸಿದ ಸಮಯಕ್ಕೆ ವರ/ವಧುವನ್ನು ನೆಲ್ಲಕ್ಕಿ ದೀಪ ಹಚ್ಚಿ ಅಲ್ಲಿ ಅಕ್ಕಿ ಹಾಕಿ ಮೇಲ್ಕಟ್ಟಡಿಗೆ ಊರುಗೌಡರು/ಮುಖ್ಯಸ್ಥರು ಕರೆತಂದು ಮೂಹೂರ್ತಕ್ಕೆ ಕೂರಿಸುವರು. ಅಲ್ಲಿ ಸಭೆಯ ಸರ್ವರೂ, ನೆಂಟರೂ, ಕುಟುಂಬದವರು, ಊರಿನವರು ತಲೆಗೆ ಅಕ್ಕಿ ಹಾಕಿ ತಾವು ತಂದ ಉಡುಗೊರೆಯನ್ನು ಕೊಟ್ಟು ಆಶೀರ್ವಾದ ಮಾಡುವುದು. “ಆಯುರಾರೋಗ್ಯ ಸುಖ ಸಂಪನ್ನರಾಗಿ ಬಾಳಿರಿ” ಎಂದು ಮನಸಾರೆ ಆಶೀರ್ವದಿಸಿ ಅಕ್ಕಿ ಹಾಕುವರು. ಒಬ್ಬರೇ ಆಗಿ ಹೆಚ್ಚಿನ ಭಾಗ ಮನೆಯಲ್ಲಿಯೆ ಮದುವೆ ತೆಗೆಯುವವರು. ಕನ್ಯೆಯ ಮನೆಯಲ್ಲಿ ಮಾತ್ರ ಹೆಚ್ಚಿಗೆ ನಡೆಸುತ್ತಾರೆ. ಹುಡುಗನ ಮನೆಯಲ್ಲಿ ಮದುರಂಗಿ ಶಾಸ್ತ್ರದ ಬಣ್ಣ ಬಂಗಾರದ ಪೆಟ್ಟಿಗೆ ತುಂಬಿಸಿ ದಿಬ್ಬಣ ಹೊರಟು ಹೆಣ್ಣು ಕರೆತಂದು ದಂಪತಿ ಮುಹೂರ್ತವನ್ನು ನಡೆಸುವರು.

**ಬಣ್ಣ ಬಂಗಾರದ ಪೆಟ್ಟಿಗೆ ತುಂಬಿಸುವುದು :**

ಸೀತಾವಳಿ ಚಪ್ಪರದ ಕೆಳಗೆ ಮೇಲ್ಕಟ್ಟೆ ನಡಿಯಲ್ಲಿ ಕುಳಿತು ಪೆಟ್ಟಿಗೆಗೆ ಹೆಣ್ಣು ಕರೆತರಲು ಬೇಕಾದ ಎಲ್ಲಾ ವಸ್ತುಗಳನ್ನು ತುಂಬಿಸುವುದು. ಈ ಪೆಟ್ಟಿಗೆಯಲ್ಲಿ ಧಾರೆ ಸೀರೆ, ಧಾರೆ ರವಿಕೆ, ಲಂಗ, ಮುಸುಕಿನ ವಸ್ತ್ರ ರಿಬ್ಬನ್, ಪಟ್ಟೆಸೀರೆ, ಪಟ್ಟೆ ರವಕೆ, ಲಂಗ, ಕಾಲು ಚೈನು, ಕಾಲುಂಗುರ, ಚಿನ್ನದ್ಹ.ಓಲೆ, ಮೂಗು ಬೊಟ್ಟು ಡಾಬು (ಕಾಸ್ತಾಳಿ/ಮುಹೂರ್ತ ಮಣೆಯ ಅವಶ್ಯವಿದ್ದಲ್ಲಿ ಅದೂ ಕೂಡ) ಒಂದು ಹಿಂಗಾರ, ವೀಳ್ಯ ಶಾಸ್ತ್ರದಲ್ಲಿ ಬರೆದ ಲಗ್ನಪತ್ರಿಕೆ, ಹಿಂಗಾರ ಒಡೆಯುವುದಕ್ಕೆ ಒಂದು ಚಿಕ್ಕ ಚಾಕು, ಕತ್ತಿ, ತೆರವಿನ ಹಣ 10–25 ಪೈಸೆ/6–25 ಪೈಸೆ ಮತ್ತು ಹೆಣ್ಣಿನ ಶೃಂಗಾರಕ್ಕಾಗಿ ಶೃಂಗಾರ ಸಾಧನಗಳು. ಹೆಣ್ಣಿನ ಮನೆ ಬಹಳಷ್ಟು ದೂರದಲ್ಲಿದ್ದರೆ ಕೆಲವೊಮ್ಮೆ ಹೆಣ್ಣೊಳಿಸಿಕೊಟ್ಟ ಕೂಡಲೇ ತುಪ್ಪ ಮಗುಚುವ ಶಾಸ್ತ್ರ ಮಾಡಿ ಮುಗಿಸಿ ಬರುವರು. ಹಾಗೇನಾದರೂ ತುಪ್ಪ ಮಗುಚುವವದಿದ್ದರೆ, ಒಂದು ಚೆಂಬಿನಲ್ಲಿ ಒಂದು ಸೇರು ಹಸುವಿನ ತುಪ್ಪ ತುಂಬಿ ಅದಕ್ಕೆ ಬಾಳೆ ಎಲೆಯ ಕತ್ತರಿ ಇಟ್ಟು ಎಲೆ ಕವಚಿ ಕಟ್ಟುವುದು. ಹಗ್ಗ ಕಟ್ಟುವಾಗ ಗಂಟು ಬೀಳದಂತೆ ಎಚ್ಚರ ವಹಿಸುವುದು.

[ಮುಂದುವರೆಯುವುದು]

# ನಿಮ್ಮ ಪತ್ರಗಳು

## ಅಭಿನಂದನೆ

ಮಾನ್ಯರೇ,

"ಕೊಡಗು ಸಂಗಾತಿ" ಪತ್ರಿಕೆಯ ಎಲ್ಲಾ ಅಂಕಣಗಳನ್ನು ನಮಗೆ ಕಳುಹಿಸಿದ್ದೀರಿ. ನಿಮಗೆ ಹೃತ್ಪೂರ್ವಕ ಕೃತಜ್ಞತೆಗಳು. ನಾವು ಕೈಗೊಂಡ ಒಕ್ಕಲಿಗರ ಇತಿಹಾಸ ರಚನೆಗೆ ಈ ಅಂಕಣಗಳಲ್ಲಿ ಅಪೂರ್ವ ಮಾಹಿತಿ ಇದೆ. ನಿಮ್ಮ ಸಾಹಸಕ್ಕೆ ಅಭಿನಂದನೆಗಳು.

● **ಡಾ. ಸೂರ್ಯನಾಥ ಕಾಮತ್,**
ಆದಿಚುಂಚನಗಿರಿ ಮಹಾಸಂಸ್ಥಾನ ಸಂಶೋಧನ ಕೇಂದ್ರ
ಬೆಂಗಳೂರು.

## ನೂರಕ್ಕೆ ನೂರು ಸರಿಯಾದದ್ದು

ಮಾನ್ಯರೆ,

ಬಾರಿಯಂಡ ಜೋಯಪ್ಪನವರ "ಹಾಕ್ ಮಣೆ, ನೂಕ್ ಮಣೆ, ತೋರ್‌ಮಣೆ" ಹಾಸ್ಯ ಲೇಖನ ತುಂಬಾ ಚೆನ್ನಾಗಿ ಮೂಡಿ ಬಂದಿದೆ. ಇದನ್ನು ಓದಿ ತುಂಬಾ ಸಂತೋಷವಾಯಿತು. ನಿಜವಾಗಿಯೂ ಇದು ಮಾನವನಲ್ಲಿರುವ ನಿಜವಾದ ನೆಂಟರು, ಬಂಧು–ಮಿತ್ರರಲ್ಲಿ ಯಾರಲ್ಲೇ ಆಗಲಿ ತೋರುವ ಪ್ರೀತಿ, ಇದು ನೂರಕ್ಕೆ ನೂರು ಸರಿಯಾದದ್ದು ಎಂದು ನಂಬುತ್ತೇವೆ.

● **ಕೆಂಜನ ರತಿ ಸುಬ್ಬಯ್ಯ,**
ಬೆಂಗಳೂರು.

## ಪರಿಪೂರ್ಣ ಸಹಕಾರಿಯಾಗಲಿ

ಮಾನ್ಯರೆ,

ನಿಮ್ಮ ಪ್ರೇರಣೆಯ ಸಂಗಾತಿಯು ನಮ್ಮ ಯುವ ಜನಾಂಗಕ್ಕೆ ಗೌಡ ಜನಾಂಗದ ಸಂಸ್ಕೃತಿ, ಸಂಪ್ರದಾಯ, ಆಚಾರ, ವಿಚಾರಗಳ ಬಗ್ಗೆ ಪರಿಪೂರ್ಣ ಮಾಹಿತಿ ನೀಡಲು ಸಹಕಾರಿಯಾಗಲೆಂದು ಹಾರೈಸುವ.

● **ಶ್ರೀಮತಿ/ಶ್ರೀ ಕಾಳೇರಮ್ಮನ ಶಶಿಧರ್,**
ಬೆಂಗಳೂರು.

## ಮೆಟ್ಟಿಲು ಆಗಲಿ

ಮಾನ್ಯರೆ,

"ಕೊಡಗು ಸಂಗಾತಿ"ಯಲ್ಲಿ ಮಾಹಿತಿ ಪರವಾದ ಲೇಖನಗಳು ತುಂಬಾ ಚೆನ್ನಾಗಿ ಮೂಡಿಬರುತ್ತಿದೆ. ಕೊಡಗು ಗೌಡ ಜನಾಂಗದ ಪ್ರತಿಭೆಗಳು ಮುಂದೆ ಬರಲು ಇದೊಂದು ಅವಕಾಶ ಹಾಗೂ ಮೆಟ್ಟಿಲು ಆಗಲೆಂದು ಹಾರೈಸುತ್ತೇವೆ.

● **ಕೋಳಿಬೈಲು ಚಿನ್ನಪ್ಪ, ನೆಂಕಟೇಶ್**
ಮತ್ತು 'ಪರಸ್ಪರ' ಸಂಸ್ಥೆಯ ಸ್ನೇಹಿತರು.

## ಯಶಸ್ಸು ಪಡೆಯಲಿ

ಮಾನ್ಯರೆ,

"ಕೊಡಗು ಸಂಗಾತಿ" ಎಂಬ ಅಭಿದಾನದಲ್ಲಿ ಪ್ರಕಟಗೊಳ್ಳುತ್ತಿರುವ ನಿಮ್ಮ ಪತ್ರಿಕೆಯ ಧ್ಯೇಯೋದ್ದೇಶ ಪ್ರಶಂಸನಾರ್ಹವಾದುದೇ ಸರಿ. ಆದರೆ ಲೇಖನಗಳ ಮಟ್ಟ ಇನ್ನೂ ಉತ್ತಮಗೊಳ್ಳಬೇಕಾಗಿದೆ. ಕತೆ–ಧಾರವಾಹಿಗಳು ಪ್ರಕಟಗೊಂಡು ಹೆಚ್ಚಿನ ಎಳೆಯರನ್ನು ಪತ್ರಿಕೆಯತ್ತ ಆಕರ್ಷಿಸಬೇಕಿದೆ. ನಿಮ್ಮ ಪತ್ರಿಕೆ ರಾಜ್ಯಾದ್ಯಂತ ಯಶಸ್ಸು ಪಡೆಯಲೆಂದು ಹಾರೈಸುವೆ.

● **ಶಶಿಪ್ರಿಯ,** ಕೊಳಕೇರಿ [ಕೊಡಗು].

## ಯಶಸ್ವಿಯಾಗಿ ಸಾಗಲಿ

ಮಾನ್ಯರೆ,

"ಕೊಡಗು ಸಂಗಾತಿ" ಬಾಳಲಾಯಿಕ ಮೂಡಿಬರ್‌ತ್ತಾ ಉಟ್ಟು. ನೀವು ಮುಕ್ಕಾಲ್‌ಭಾಗ ಆದರೂ ಅರೆಭಾಷೆಲಿ ಪ್ರಕಟಿಸಿ. ಹಂಗೆ ಕಾಲಕ್ರಮೇಣ ಪೂರ ಅರೆಭಾಷೆಲಿ ಬರ್‌ಲಿ ತ ನಾವು ಹಾರೈಸುವೆ.

● **ಚೇಯಂಡಿರ ವೀಣಾಕುಶಾಲಪ್ಪ ಮತ್ತೆ ಮನೆವು,**
ಕಂತೆಬಸವನಹಳ್ಳಿ.

## ಚೆನ್ನಾಗಿ ಮೂಡಿಬರುತ್ತಿದೆ

ಮಾನ್ಯರೆ,

ತಮ್ಮ ಪತ್ರಿಕೆ "ಕೊಡಗು ಸಂಗಾತಿ" ತುಂಬಾ ಚೆನ್ನಾಗಿ ಮೂಡಿ ಬರುತ್ತಿದೆ. ನಿಮ್ಮ ಪ್ರಯತ್ನ ಹಾಗೂ ಎದೆಗಾರಿಕೆಗೆ ನನ್ನ ಅಭಿನಂದನೆಗಳು. ಪತ್ರಿಕೆ ಇನ್ನಷ್ಟು ಉತ್ತಮವಾಗಿ ಬರಲೆಂದು ಶುಭ ಹಾರೈಕೆಗಳು.

○ **ನಾಪಂಡ ಗೀತ (ಚಕ್ಕುಲಿ)** ಮಡಿಕೇರಿ.

## ದಾರಿ ದೀಪವಾಗಲಿ

ನಮ್ಮ ಭಾಷೆಲಿ ಒಂದ್ ಪತ್ರಿಕೆ ಬಂದದ್ ನೋಡಿ ತುಂಬ ಖುಷಿಯಾತ್. ಇದ್ ಇಂದ್‌ನ ಯುವ ಗೌಡ ಜನಾಂಗದ ಏಳಿಗೆಗೆ ದಾರಿ ದೀಪ ಆಗಲಿಂತೇಳಿ ನಮ್ಮ ಕುಲದೇವತೆನ ಆಶೀರ್ವಾದಂದ ಪ್ರಜ್ವಲವಾಗಿ ಬೆಳೆಯಲಿಂತ ಹಾರೈಸಿವೆ.

● **ನಡುವಟ್ಟಿರ ಪಳಂಗಪ್ಪ ಮತ್ತೆ ಮನೆವು,** ಬಾಡಿಗ.

## ಅರೆ ಭಾಷಿಕ ವಿಭಾಗ

# ತಂತ್ರಶಾಲಿ ಕಿಟ್ಟು

ಕಿಟ್ಟು ಭಾರೀ ತಂತ್ರಶಾಲಿ. ಪ್ರತಿದಿನ ಒಂದ್ ಕೀಟ್ಲೆ ಮಾಡದಿದ್ದರೆ ಅವಂಗೆ ನಿದ್ದೇನೆ ಬಾದುಲೆ.

ಹಿಂಗಿದ್ದರೂ ಪೆಟ್‍ಲ್ಂದ ತಪ್ಪಿಸಿಕಣಿಕೆ ಕಿಟ್ಟುನಕ್ಕಲೆ ಒಂದಲ್ಲ ಒಂದ್ ಉಪಾಯ ಇದ್ದೆ ಇದ್ದದೆ.

ಒಮ್ಮೆ ಕಿಟ್ಟುನ ಮಾವ ದೂರಂದ ಪ್ರವಾಸ ಮುಗ್ಸಿ ಬಾಕಾಕನ ತುಂಬಾ ಖರ್ಜೂರ ತಂದಿದ್ದೊ. ಅವರ್ನ್ ಕಿಟ್ಟುನ ಪಪ್ಪನ ಕೈಲಿ ಕೊಟ್ಟಿದ್ದೊ. ಖರ್ಜೂರನ ನೋಡಿಕಾಕನ ಕಿಟ್ಟುನ ಬಾಯಿಲಿ ನೀರ್ ಬಾಕೆ ಸುರಾತ್. ಕಿಟ್ಟುಗೆ ತೋರ್‍ಸದೆ ಅಪ್ಪನ ಪೊಪ್ಪ ಅಲ್‌ಮೆರಾಲಿ ಅಡಂಗಿಸಿ ಇಸಿದ. ಕಿಟ್ಟುನ ಕಣ್ಣಿಗೆ ಬಿದ್ದರೆ ಅದು ಉಳಿಯುವ ಸಾಧ್ಯತೆಯೇ ಇತ್ತ್‍ಲೆ. ಕಣ್ಣಿಗೆ ಬಿದ್ದ್ ಬಿಟ್ಟರೆ ಪೂರ್ತಿ ತಿಂದು ಮುಗ್‍ಸುವ ಸ್ವಭಾವ ಅವಂದ್. ಆದರೆ ಪೊಪ್ಪ ಅಲ್‌ಮೆರಾಲಿ ಖರ್ಜೂರ ಅಡಂಗಿಸಿ ಇಸಿದರ ಕಿಟ್ಟು ಅಡಂಗಿ ನಿಂತು ನೋಡ್ದೆ. ಕಿಟ್ಟು ಅವರ್ನ ಗಮನಿಸಿಟ್ಟುಂತ್ತ ಪೊಪ್ಪಂಗೆ ಗೊತ್ತಾದೆ. ಪೊಪ್ಪ ಕಿಟ್ಟುಗೆ ಕೇಳ್ಸಲಿತೇಳಿ ಅಮ್ಮನಕ್ಕಲೆ ಜೋರಾಗಿ ಹೇಳ್ದೆ.

"ಗದ್ದೆಲಿರುವ ಇಲಿಗಳ ಕೊಲ್ಲಿಕೆ ನಾನಿಲ್ಲಿ ಒಂದಿಷ್ಟು ವಿಷದ ಕಾಯಿ ಇಟ್ಟೊಳೆ. ಜಕ್ಕ ಮುಟ್ಟದಂಗೆ ನೋಡಿಕಾ". ಪೊಪ್ಪನ ಐಡಿಯಾ ಕಿಟ್ಟುಗೆ ಗೊತ್ತಾಗಿ ಬುಡ್ತ್.

ಪೊಪ್ಪ ಹೊರಗೆ ಹೋದ ಹೊತ್ತು ನೋಡಿ ಕಿಟ್ಟು ಅಲ್‌ಮೆರಾದ ಬಾಗ್ಲ್ ತೆಗ್ದ್ ಖರ್ಜೂರನ ತಿಂದು ಮುಗ್ಸಿದೆ. ಖರ್ಜೂರ ಹೊಟ್ಟೆಗೆ ಹೋದ ಮೇಲೆ ಕಿಟ್ಟುಗೆ ಪೊಪ್ಪನ ನೆನಪು ಬಂದ್ ಮೈ ಮರ್ಶಿಕೆ ಸುರುವಾದೆ. ಪೊಪ್ಪಂಗೆ ಗೊತ್ತಾದರೆ ಆಗುವ ಅನಾಹುತನ ನೆನ್ಸಿ ಎಚ್ಚರಾದೆ. ಕಿಟ್ಟು ಹೆದ್ರಿಕೆಂದ ತಲ್ಲಣಿಸಿ ಹೋದೆ. ಪೆಟ್ಟು ಬೀಳ್ದು ಖಂಡಿತಾಂತ ಆತ್. ಪೆಟ್ಟು ತಪ್ಪಿಸಿಕಣಿಕೆ ಏನು ಮಾಡ್ದುಂತಾ ಗೇನಾ ಮಾಡ್ತಾ ಇದ್ದದೆ. ಒಂದ್ ಉಪಾಯ ಹೊಳ್ತ್. ಅಂವ ಮೆಲ್ಲೆ ಪೊಪ್ಪನ ಆಫೀಸ್ ರೂಮುಗೆ ಹೋದೆ. ಮೇಜ್ ಮೇಲೆ ಇದ್ದ ಮಸಿ ಕುಪ್ಪಿನ ತಕಂಡ್ ಕೆಳ್ಗೆ ಹಾಕಿದೆ. ಮಸಿ ಕುಪ್ಪಿ ಕೆಳ್ಗೆ ಬಿದ್ದು ಚೂರ್ ಚೂರಾದೆ. ಮತ್ತೆ ಏನೂ ಗೊತ್ತಿಲ್ಲದವ ನಂಗೆ ಹೋಗಿ ಮಂಚಲಿ ಮುಸುಕು ಹಾಕಂಡ್ ಮಲಗಿದೆ.

ಕತ್ತಲೆ ಆಕನ ಪೊಪ್ಪ ಬಾಕನ ಕಿಟ್ಟು ಮುಸುಕು ಹಾಕಂಡ್ ಮಲ್‌ಗಿರ್‌ದರ ನೋಡಿ ಏನಾತುತೇಳಿ ವಿಚಾರಿಸಿದೆ. ಆಗ ಕಿಟ್ಟು ಸಣ್ಣಸ್ವರಲಿ ಅಪ್ಪ ನಿಮ್ಮ ಮಸಿ ಕುಪ್ಪಿ ನನ್ನ ಕೈಯಿಂದ ಕೆಳ್ಗೆ ಬಿದ್ದ್ ಒಡ್ದ್ ಹೋತು. ನಿಮ್ಮಂದ ಪೆಟ್ಟು ಬಿಳ್ದುತಾ ನಂಗೆ ಹೆದ್ರಿಕೆ ಆತ್ ಅದ್ಕೆ ಸಾಯನಂತಾ ಹೇಳಿ ನೀವು ತಂದಿಟ್ಟ ವಿಷದ ಕಾಯಿನ ನಾನ್ ತೆಗ್ದ್ ತಿಂದುಬುಟ್ಟೆ. ಇನ್ನೇನ್ ನಾನು ಸತ್ತು ಹೊನೆತಾ ಹೇಳ್ದೆ.

ಕಿಟ್ಟುನ ಮಾತ್ ಕೇಳಿ ಅವರ ಪೊಪ್ಪ ಬಿದ್ದು ಬಿದ್ದು ನಗಾಡುವೆ. ತಂತ್ರಶಾಲಿ ಮಗನ ಮೇಲೆ ಕೈ ಮಾಡಿಕೆ ಯಾವ ಪೊಟ್ಟಂಗೆ ಸಹಾ ಕೈ ಬಂದದೆತಾ ನೀವೆ ಗೇನಾ ಮಾಡಿ.

**● ಬೈನೆರವನ ಸಿ. ಪರಶುರಾಮು,**
ಮದೆನಾಡು

---

**ಹಾಸ್ಯ ಲೇಖನ :**

# ಸರ್ ನೋಡಿ ನಿಮ್ಮ ಅಪ್ಪ ಹೋಗ್ತಾವಳೋ

ಒಬ್ಬ ಶ್ರೀಮಂತ ಒಂದು ಸಾರಿ ಕಾರ್‌ಲಿ ಹೋಗ್ತಾ ಇದ್ದದೆ. ಅಂವನ ಪಕ್ಕಲಿ, ಇನ್ನೊಬ್ಬ ಕುದ್ದಿದ್ದದೆ. ಹಿಂಗೆ ದಾರಿಲಿ ಹೋಗ್ತಾ ಇರ್ಕನ ಒಂದು ಹಸ್ ಅಡ್ಡ ಬಂದದೆ, ಅವರ್ನ ನೋಡ್ದ ಶ್ರೀಮಂತ, ಕಾರ್‌ನ ನಿಲ್ಸಿಬುಟ್ಟ್ ಪಕ್ಕ ಕುದ್ದವನ ಕರ್ದ್, ನೋಡಪ್ಪಾ ಕಾರ್‌ನ ಡಿಕ್ಕಿಲಿ ಬಾಳೆ ಹಣ್ಣ್ ಉಟ್ಟು ಅದರ್ನ ತೆಗ್ದ್ ಹಸ್‌ಗೆ ಹಾಕ್ ತ ಹೇಳ್ದೆ. ಆಗ, ಅಂವ ಯಾಕೆ ಸಾರ್ ತ ಕೇಳ್ಕನ ನೋಡಪ್ಪಾ, ಹಸ್ ತೆಂಳ್ರೆ ಗೋವು. ಗೋವು ನನ್ಮ ಅಮ್ಮ ಇದ್ದಂಗೆ. ಅದರ್ನ ನಾವು ಅಮ್ಮ ನಾಂಗೆ ನೋಡಿಕಣಕೂಂತ ಹೇಳ್ದೆ. ಆಗ ಅಂವ ಸರಿ ಸಾರ್‌ಂತ ಹೇಳಿ, ಬಾಳೆಹಣ್ಣ್‌ನ ಹಸ್‌ಗೆ ಹಾಕಿದೆ. ಸರಿ ಅಲ್ಲಿಂದ ಕಾರ್ ಬುಟ್ಟ್‌ಕಂಡ್ ತುಂಬಾ ಸ್ಪೀಡ್‌ಲಿ ಹೋಗ್ತಾ ಇದ್ದದೆ. ಹಿಂಗೇ ಹೋಗ್ತಾ ಇರ್ಕನ ಪಕ್ಕಲಿ ಕುದ್ದಂವ ಜೋರಾಗಿ ಸಾರ್, ಸಾರ್, ಸಾರ್, ಕಾರ್ ನಿಲ್ಸೀತ ಹೇಳ್ತ್. ಆಗ ಶ್ರೀಮಂತ ಸಡನ್ನ್ ಕಾರ್ ನಿಲ್ಸಿಬುಟ್ಟ್ ಯಾಕಪ್ಪಾತ ಕೇಳ್ಕನ, ಪಕ್ಕ ಕುದ್ದಂವ ಅಲ್ಲಿ ನೋಡಿ ಸಾರ್, ನಿಮ್ಮ ಅಪ್ಪ ಹೋಗ್ತಾ ಒಳೊಂತ ಹೇಳ್ದೆ. ಆಗ ಶ್ರೀಮಂತ ಎಲ್ಲಿಂತ್ ನೋಡ್ಕನ ರೋಡ್‌ಲಿ, ಒಂದು ಎತ್ತ್ ಹೋಗ್ತಾ ಇದ್ದದೆ.

**● ಓಡಿಯಂಡ ಚಿತ್ರಾ ಈರಪ್ಪ,**
ಮೇಕೇರಿ.

## ಒಂದ್ ಸಂಸಾರದೊಳಗೆ

ಅಂದ್ ಎಂದ್‌ನಂಗೆ ದಾರಿಲಿ ಚುರ್ಕು ಆಗಿ ನಡ್‌ಕಂಡ್ ಹೋಕನ ಇವ್ಳು ಹೇಳ್ತ್. ಎಂಥ ನೀವು ಬಾಳ ಜೋರಾಗಿ ನಡ್ದರೆ... ಇಂದ್ ಆಫೀಸಿಗೆ ಹೊರಟದಾ... ಅಲ್ಲಾ ನೆಂಟ್ರ ಮನೆಗೆ ಹೊರಟದಾ ? ಇಂದ್ ಆಫೀಸಿಗೆ ರಜಾ ಅಲ್ಲಾ ? ಆಗ ನಾನ್ ಹೇಳ್ದೆ... ಅಲ್ಲನೆ ಆದ್ ಅಭ್ಯಾಸ ಬಲ ಏನ್ ಮಾಡಿಕಾದೆ. ದಿನಾ ಬಸ್ಸಿಗೆ ಓಡಿ ಬಂದ್ ಅದೇ ಅಭ್ಯಾಸಂತ ಹೇಳ್ದೆ. ಅಂತು ಮೆಲ್ಲಂಗೆ ನಡ್‌ಕಂಡ್ ಬಂದ್ ಬಸ್ ನಿಲ್ಲುವಲ್ಲಿಗೆ ಬಂದೋ. ಬಸ್ಸ್ ಬಾಕೆ ಸುಮಾರ್ ಹೊತ್ತು ಉಟ್ಟುತ್ತಾ ಗೊತ್ತಾಕನ ಇವಳು ಶುರು ಮಾಡ್ತ್.

ಅಲ್ಲಾ ಒಂದು ವಿಷ್ಯನ ನಾನ್ ಮೊನ್ನೆ ನಿಮ್ಮೊಟ್ಟಿಗೆ ಹೇಳಕುತಾ ಗ್ಯಾನ ಮಾಡಿದ್ದೆ. ಆತೇಲೇ... ಮತ್ತೆ ಮನೇಲಿ ಎಲ್ಲವೂ ಇರ್ ಕನ ಹೇಳಿರೆ ಗಂಡನು ಹೆಣ್ಣ್ನು ರೂಂ ಒಳಗೆ ಎಂತ್ತೋ ಗುಸು ಗುಸ್ ಮಾತಾಡ್ತ ಓಳೋಂತ ಹೇಳುವ್ರೋಂತೇಳಿ ಹೇಳ್ತಲೇ. ನೋಡಿ ನಂಗೆ ಮಾತ್ರ ಮನೇಲಿ ಇರಿಕ್ಕೆ ಆದ್ಲೆ. ನಿಮ್ಮ ಅಣ್ಣಾ ನೋಡಿ ಮನೆ ಕಾರ್‌ಬಾರ್ ಜವಾಬ್ದಾರಿನ ಎಲ್ಲಾ ನಿಮ್ಮ ಮೇಲೆ ಹಾಕಿ, ಹೆಣ್ಣ್ ಮಕ್ಕಳ ಇಲ್ಲಿ ಬುಟ್ಟು ಎಷ್ಟು ಲ್ಯಾಕ್ ಮಿಲ್ಟ್ರಿಲಿ ಕುದ್ದುಟು. ನಿಮ್ಮ ಅತ್ತಿಗೆಗೆ ಮಕ್ಕಳ ಚಾಕ್ರಿ ಮಾಡಿಕೆ ಪುರುಸೊತ್ತು ಇಲ್ಲೆ. ಅವ್ಳು ಎಲ್ಲಿ ಮನೆ ಕೆಲ್ಸ ಮಾಡ್ದೆ. ಅವ್ಳು ನಂಗೇ ಎಲ್ಲಾ ಕೆಲಸ ಗೊತ್ತಿರುವಂಗೆ ಆಡ್ವೆ ನಿಮ್ಮ ಅಮ್ಮಂಗೂ ಅಷ್ಟೇ ನಾ ಎಂತಾ ಕೆಲ್ಸ ಮಾಡಿರೂ ಸರಿ ಆಕಿಲೆ. ಎಲ್ಲಾ ನಿಮ್ಮ ಅತ್ತಿಗೆನಕ್ಕಲೇ ಕೇಳಿ ಸರಿ ಉಟ್ಟಾಂತ ಕೇಳ್ದೆ. ಈ ಹಸುಗ ಗದ್ದೆ, ತೋಟಂತೇಳಿ ನಂಗೆ ಸಾಕಾಗಿ ಹೋತ್. ಇದು ನೀವ್‌ಗೆಲ್ಲಾ ಎಲ್ಲಿ ಕಂಡದೆ ? ನೀವು ಬೆಳ್ಗೆ ಬಟ್ಟೆ ಹಾಕಿ ಹೋದರೆ ಸಾಯಂಕಾಲನೇ ಬಾದು. ಅದೊ ಮಾಪ ಒಬ್ಬ ಅತ್ತೆ ಹಾಕಿದ ಗೆರೆ ದಾಟುದ್ಲೆ. ಇಷ್ಟು ಹೇಳ್‌ಕನ ನಾನು ಮಾರ್ಗಲಿ ಯಾವುದೆಲ್ಲಾ ವಾಹನಗ ಹೋದೆ ವೆತ ನೋಡಿಕಂಡ್ ಕಾಲ ಕಳ್ದೆ. ಒಮ್ಮೆ ಬಸ್ ಬಂದಿದ್ದರೆ ಸಾಕೂಂತಾಗಿತ್ತ್. ಅಲ್ಲಾ ನೀನೆ ಇಷ್ಟೆಲ್ಲಾ ಭಾಷಣ ಮಾಡ್‌ದ ವಿಷಯ ಎಂತಾಂತ ಹೇಳ್ತಲೆ ಅಂತ ಹೇಳ್ದೆ. ಆಗ ಇವಳು ನಾವೇಕೆ ಮನೆ ಬುಟ್ಟು ಹೋಗಿ ಪೇಟೆಲಿ ಬಾಡಿಗೆ ಮನೆ ಮಾಡಿಕಂಡ್ ಇರ್‌ಕ್ಕಾಗದ್ ? ಇದ್ ಕೆನಾ ಇಷ್ಟೆಲ್ಲಾ ಪೀಠಿಕೆ ಹಾಕಿದ್ದಾಂತ ನಾನ್ ಕೇಳ್ದೆ. ಅಲ್ಲಿಂದಿತ್ತ ಇವ್ಳು ಒತ್ತಾಯ ಮಾಡಿಕಂಡ್ ಇತ್ತ್. ಕಡೆಗೆ ನಾನ್ ಹೇಳ್ದೆ, ಆತ್ ನಿಧಾನಲಿ ನಾನ್ ಮನೆಲಿ ಕೇಳಿನೆಂತ. ಅಂತ್ ನೆಂಟ್ರ ಮನೆಂದ ಬಂದ ಮೇಲೆ ಮೂರು ದಿನ ಕಳ್ದರೂ ನಾನ್ ವಿಷ್ಯನ ಅಮ್ಮನೊಟ್ಟಿಗೆ ಹೇಳದೇ ಇರ್‌ಕನ ಇವಳ ಮುಖ ದಪ್ಪ ಆಗ್ದೆ ಇತ್ಲೆ. ಮಾರನೆ ದಿನ ಅಮ್ಮ, ನಾನ್, ಇವ್ಳು ಮೂರು ಜನ ಇರ್‌ಕನ ಅಮ್ಮ ನೊಟ್ಟಿಗೆ ನಾನ್ ಕೇಳ್ದೆ ಮೆಲ್ಲೆ. ಅಮ್ಮ ಅದ್... ಅಷ್ಟೊತ್ತಿಗೆ ಅಮ್ಮ ಕೇಳ್ತ್, ಎಂತ ಮಂಜಂತೇಳಿ. ಎಂತಾ ಅದ್ ಅದ್ ಅಂತೇಳಿಯಾ ? ಎಂಥ ವಿಷಯ ಒಮ್ಮೆ ಹೇಳ್‌ತ್ತಾ. ಆಗ ನಾ ಅದ್ "ಇವಳು ಹೇಳ್ದೆ, ನಾವು ಬ್ಯಾರೆ ಮನೆ ಮಾಡ ನೂಂತ." ಈ ವಿಷಯ ಕೇಳಿ ಅಮ್ಮಂಗೆ ತಲೆಗೆ ಮರ ಬಿದ್ದಂಗೆ ಆತ್. ಅಮ್ಮ ಹೇಳ್ತ ನಾನ್ ಗ್ಯಾನ ಮಾಡ್ದೆ. ಇವ್ಳು ದೊಡ್ಡ ಸೊಸೆನಂಗೆ ಸಾದ್ ಅಲ್ಲಾಂತ. ಅತ್ತ ಇತ್ತ ಜನ ಎಂತ ಹೇಳ್ವ ? ಮದ್ವೆ ಆಗಿ ವರ್ಷ ಆತ್ಲೆ ಮನೆ ಬೇರೆ ಮಾಡ್‌ದಾ. ಒಂದು ಗಾದೆ ಉಟ್ಟು ನೋಡು 'ಮುತ್ತು ಕೊಡುವವಳು ಬಾಕನ ತುತ್ತು ಕೊಟ್ಟ ಅಮ್ಮನ ಮರ್ಯಾದಾಂತ' ಹೇಳ್ದಂಗೆ... ನಾ ಬುಟ್ಟ ಕಣ್ಣ್‌ಲಿ ಇವುಳ್ನ ನೊಡ್ದೆ !

**ಎ. ಕೆ. ರಮೇಶ,** ಚೇರಂಬಾಣೆ.

## : ನಗೆ ಹನಿಗಳು :

ಗೂಡೆ : ಈಗ ಟಪಾಲ್ ಚಾರ್ಜ್ ಹೆಚ್ಚಾದ್ದ್ ಗೊತ್ತುಟ್ಟಲ್ಲ ?

ಹೈದ : ಹೌದ್, ಪೋಸ್ಟ್ ಕವರ್‌ಗೆ ಒಂದ್ ರೂಪಾಯಿ ಏರ್ಸಿಯೊಳೊ, ಯಾಕೆ ಹೇಳ್ ?

ಗೂಡೆ : ಇನ್ನ್ ಮುಂದೆ ನೀನ್ ಕವರೊಳಗೆ ರಿಪ್ಲೈಗೆ ಇನ್‌ಲೇಂಡ್ ಸೀಟ್ ಇಸೊಕು. ಇಲ್ಲರೆ ನಮ್ಮ ಪ್ರೀತಿ ಮುಂದಕ್ಕೆ ಹೋದು ಕಷ್ಟ.



ಕುಡುಕನಕ್ಕಲೆ ಸ್ನೇಹಿತ ಕೇಳ್ತ್, "ಇದೇನಾ ಇಷ್ಟೊಂದು ಚಿಲ್ರೆ ಕಂಡದೆ, ಎಲ್ಲಿಂದ ?

ನಾನ್ ನಿನ್ನೆ ಸ್ವಲ್ಪ ಟೈಟಾಗಿ ರಸ್ತೆ ಬದಿಲಿ ಬಿದ್ದ್ ಹೋಗಿದ್ದೆ, ಇದ್ಯಾರೊ ಬಿಕ್ಷುಕ ಇರ್ದೂಂತ ಹೇಳಿ ಜನಗ ಹಾಕ್ದ ಚಿಲ್ರೆ ಮಾರಾಯ.

● **ಎಂ. ಇ. ಮುಹಮ್ಮದ್,** ಮಡಿಕೇರಿ.

## ಆತುರಲಿ ಬಸ್ ಹತ್ತಿ ಹೋತ್ ಹೈದ

ಆತುರಲಿ ಬಸ್ ಹತ್ತಿ ಹೋತ್ ಸಿನೆಮಕೆ ಹೈದ
ಮಾತ್ ಕೇಳದೆ ಮನೆಲಿ ಬೈಸಿಕಂಡ್ ।
ಸೋತ್ ಹೋಕಾದ್ ಅಂದ್ ನೋಡದೆನೆ ಅಂವ ಸಿನೆಮ
ಬಾತ್ ಮನೆಗೆ ಬಾಯಿ ಮುಚ್ಚಿಕಂಡ್ ॥

ಕಾಸ್ ತೆಕೊಂಡೋಗಿತ್ತ್ ನೋಟೊಂದ್ ನೂರರ
ಸೀಟಾಗ ಹಾಕಿಯುಂವ ಪೇಂಟ್ ಶರ್ಟ್ ।
ಬೂಟ್ ಹಾಕಿದ್ ಮತ್ತೆ ಕೋಟೊಂದ್ ಕೋಸಿಕಂಡ್
ಮನೇ ದಾಟ ಹೋಕನನ ಮಾಡಿತ್ತ್ ಬಾರಿ ಸ್ಟೆಂಟ್ ॥

ಅಂವ ಹೋದ ಆ ಬಸ್‌ಲಿ ಕುದ್ರಿಕೆನು ಸೀಟಲ್ಲೆ
ಕಾಲೆರ್ಡ್ ತಳವೂರಿ ನಿಲ್ಲಿಕೂ ಕಷ್ಟ ।
ಬೆಂಗಳೂರ್‌ನ ದೊಡ್ಡ ಪಟ್ಟಣದ ಒಳಗಿಂದ್
ತೂಗಾಡಿ ಜನ ಹೋದು ಕಂಡದಿದ್ ಸ್ಪಷ್ಟ ॥

ಹೊಸ ಸಿನೆಮ ಬಂದುಟದು ಸುರುನ ದಿನ ನೋಡೊಕದ್
ಎಂಬೊಂದು ಹುಚ್ಚಿಟ್ಟ್ ಕೆಲವು ಜನಕೆ ।
ಸೀಟ ಹೊಡೆವೊವು ಅಂದೆ ಲೂಟ ಮಾಡವೂ ಅಂದೆ
ಲಾಠಿ ಚಾರ್ಜಿನೂ ಅಂದೆ ಸುರುನ ದಿನಕೆ ॥

ಆ ಬಸ್ಸ್ ಪೇಟೊಳಗೆ ಹೋಗಿ ನಿತ್ತತ್‌ಮೆಲ್ಲ
ಜನಂಗಿಳ್ದೊ ಆ ಸಿನೆಮ ಟಾಕೀಸು ಅಲ್ಲೆ ।
ಈ ಹೈದ ಕೋಟೊಳಗೆ ಎರಡು ಕೈಗಳ ತುರ್ಕಿ
ಹುಡ್ಕಿತಾ ಜೇಬೊಳಗೆ ನೋಟಿ ಇಲ್ಲೇ ॥

ಗಡಿ ಬಿಡಿಲಿ ಪೇಟೊಳಗೆ ಹೋದ ನೀವುಗೆನು ಕೂಡ
ಆಗಿರ್ದು ಹಿಂಗೆ ಅದ್ ಎಷ್ಟೊ ಸರ್ತಿ ।
ನಮ್ಮ ವಸ್ತುನ ಮೇಲೆ ನಾವಿಡದಿದ್ದರೆ ಗೇನ
ಆದು ಕಳ್ಳರ ಜೇಬು ದಿನನು ಭರ್ತಿ ॥

ಹೈದಂಗೆ ಕಾಸಿಲ್ಲೆ ಮನೆಗಂದ್ ಬಾಕಂವಂಗೆ
ಇದ್ದ ದುಡ್ಡೆಲ್ಲ ಅದ್ ಪಿಕ್‌ಪೆಕೆಟ್ ಆತ್ ।
ಹೈದ ಹೇಳಿದ ವ್ಯಥೆನ ಕಥೆನ ಕೇಳಿದ್ ನಂಗೆ
ಮನಸ್ಸೊಳಗೆ ತುಂಬಂದ್ ಬೇಜಾರ ಆತ್ ॥

● **ಹೊದ್ದೆಟ್ಟ ಭವಾನಿಶಂಕರ್**, ಬೆಂಗಳೂರು.

**ಕೊಡಗು ಸಂಗಾತಿ ಪತ್ರಿಕೆನ**
**ತಕಂಡ್ ಓದಿ**

## ನಾನ್ ಮುರ್ತ್ತಿ

ಒಂದ್ ದಿನ ಮಾಸ್ಟ್ರ ರಾಮಾಯಣದ ಪಾಠ ಹೇಳ್ತ್ತಿದ್ದೊ. ಅದ್ ಮಧ್ಯಾನ ಮೇಲೆ ಪಸ್ಟ್ ಪೀರಿಯೆಡ್ಲಿ ರಾಮ ಧನಸ್ಸುನ ಮುರ್ದ ಬಗ್ಗೆ. ಎಲ್ಲವೂ ಪಾಠ ಕೇಳ್‌ತಿದ್ದೋ. ಆದರೆ ಸೋಮುಗೆ ಮಧ್ಯಾನ ತಿಂದದ್ ಜಾಸ್ತಿ ಆಗಿತ್ತ್. ಅದರ್‌ಂದ ಅವಂಗೆ ಒಳ್ಳೆ ನಿದ್ದೆ ಹತ್ತಿತ್. ಮಾಸ್ಟ್ರ ಸೋಮುನ ಕಡೆ ನೋಡಿ, ಸೋಮು ಧನಸ್ಸುನ ಯಾರ್ ಮುರ್ದದೂಂತ ಕೇಳ್ತ್ತ? ನಿದ್ದೆಂದ ಎದ್ದ ಸೋಮು, ನಾನ್ ಮುರ್ತ್ತೀಲೆ ಸರ್ ಅಂತ ಹೇಳ್ತ್.

ಇದರ್ನ ಕೇಳಿ ಮಾಸ್ಟ್ರಗೆ ತುಂಬಾ ಬ್ಯಾಜಾರ್ ಆತ್. ನಾನ್ ಇಷ್ಟೊತ್ತ್ ಪಾಠಮಾಡ್ದ್ದ ಎಮ್ಮೆ ಮೇಲೆ ಮಳೆ ಸುರ್ದಂಗೆ ಆತ್‌ತ ಗ್ಯಾನ ಮಾಡಿಕಂಡೇ ಸ್ಟಾಪ್ ರೂಮ್‌ಲಿ ಕುದ್ದಿದೊ.

ಮಾಸ್ಟ್ರ ಬ್ಯಾಜಾರ್‌ಲಿ ಇರ್‌ದರ ನೋಡಿ ಟೀಚರ್, ಮಾಸ್ಟ್ರಗ ಎಲ್ಲಾ ಕೇಳ್ದೊ. ಯಾಕೆ ಬೇಜಾರ್‌ಲಿ ಕುದ್ದೊ ಛರಿ? ಆಗ ಮಾಸ್ಟ್ರ ನಡ್ದ ವಿಷಯನೆಲ್ಲ ಹೇಳ್ದೊ. ಅಂವ ನಾನ್ ಧನಸ್ಸ್ ಮುರ್ತ್ತಲೆಂತ ಹೇಳ್ತ್. ಅದ್ಕೆ ನಂಗೆ ಬೇಜಾರೂಂತ ಹೇಳ್ದೊ. ಅದ್ಕೆ ಟೀಚರ್ ಮತ್ತೆ ಮಾಸ್ಟ್ರಗ ಹೇಳ್ದೊ. ಅಂವ ಪಾಪದ ಹೈದಲ್ಲಾ...ಅಂವ ಹಂಗೆ ಮಾಡಿಕೇ ಇಲ್ಲೇಂತ ಹೇಳ್ದೋ. ಇದರ್ನ ಕೇಳ್ದ ಮಾಸ್ಟ್ರಗೆ ಇನ್ನೂ ಬೇಜಾರ್ ಆತ್. ಈ ಬೇಜಾರ್‌ನ ನೋಡಿ ಪ್ರಿನ್ಸಿ ಕೇಳ್ತ್. ಅದ್ಕೆ ಮಾಸ್ಟ್ರ ನಡೆದ ದನ್ನೆಲ್ಲ ಹೇಳ್ತ್. ಆಗ ಪ್ರಿನ್ಸಿ ಹೇಳ್ತ್ ಆಗಿರ್ದು ಅಂವ ತುಂಬ ಕೀಟ್ಲೆ ಹೈದ, ಅವನೇ ಮುರ್‌ದಿರ್ದ್ದೂಂತ ಹೇಳ್ತ್. ಮಾಸ್ಟ್ರಗೆ ಇದ್ರ ಕೇಳಿ ಸುಸ್ತೋ ಸುಸ್ತು. ಅವನ ಬೇಜಾರನ ಇನ್ಯಾರಿಗೆ ಹೇಳ್ದ್ದ ಹೇಳಿ.

● **ಅಚ್ಚಲ್ಪಾಡಿ ಬೀನ ಗೋಪಾಲ**, ಮಡಿಕೇರಿ

## ಸುಬ್ಬಕ್ಕ ಅಜ್ಜಿ ಹೇಳ್ತಿದ್ದ ಗಾದೆಗ

○ ಸಮುದ್ರದ ಕಪ್ಪೆ ಹೇಳ್ದ ಕಥೆ ಕೇಳಿ, ಬಾವಿಲಿದ್ದ ಕಪ್ಪೆ ಹಿಯಾಳ್ಸಿತ್‌ಗಡ!

○ ಹಣಕ್ಕಿಂತ ಗುಣ ಮೇಲ್.

○ ಬಡಸ್ತಿತೇಳಿ ಕೊರ್ಗ್‌ಬಡ, ಶ್ರೀಮಂತಿಗೇಳಿ ಹಿಗ್ಗ್‌ಬಡ.

○ ಅವಂಗೇನ್ ಗೊತ್ತು? ಪುಸ್ತಕದೊಳಗಿನ ಬದ್ನೆಕಾಯಿ

● **ಕೋಟೆಮನೆ ಮನೋಹರ ಶಿವಯ್ಯ**, ಮದೆನಾಡು.

## ನಮ್ಮ ಸಂಸ್ಕೃತಿ ಮರೆಯಾಗುತ್ತಿದೆಯಾ ?

ಈಗಿನ ಕಾಲಕ್ಕು, ಹಿಂದಿನ ಕಾಲಕ್ಕು ಆದೆಷ್ಟೊ ಬದಲಾವಣೆ ಆವುಟು. ಮನೆಗಳಲ್ಲಿ, ತಿನಿಸುಗಳಲ್ಲಿ, ನಾವು ಉಡುವ ವಸ್ತ್ರಗಳಲ್ಲಿ. ಮತ್ತೊಂದು ಮುಖ್ಯ ತೇಳ್‌ರೆ ನಮ್ಮ ಸಂಸ್ಕೃತಿ ಮತ್ತು ನಮ್ಮ ಭಾಷೆ ನಾಶ ಆಗ್ತಾವುಟ್ಟು.ಎಲ್ಲಿ ಬಡತನವುಟ್ಟೊ ಅಲ್ಲಿ ಅರೆಭಾಷೆ, ಸಂಸ್ಕೃತಿ ಉಟ್ಟು. ಶ್ರೀಮಂತನ ಮನೆಲ್ಲಂತೂ ಇದೆಲ್ಲ ನಾಶ ಆವುಟು.

ಶ್ರೀಮಂತ ಮನೆತನದ ಯುವ ಜನಾಂಗಕ್ಕಂತೂ ಅರೆ ಭಾಷೆ ಮಾತಾಡಿಕೆ ಬಾದುಲೆ. ಅದೊಂದು ಗೊಡ್ಡು ಸಂಪ್ರದಾಯತ ತಿಳ್ಕೊಂಡೊಳೊ. ಹಳ್ಳಿಲ್ಲಿ ಇದ್ದಂವ ಪಟ್ಟಣಲಿ ಕುದ್ದು ಬುಟ್ಟರೆ ಸಾಕ್ ಅರೆಭಾಷೆನ ಮರ್ತ್ ಕನ್ನಡ ಮಾತಾಡುವೆ.

ಅರೆಭಾಷೆಯ ನಾವು ನಮ್ಮ ಆಚಾರ, ವಿಚಾರ ಇದನ್ನ ಕಲಿಯದು ಎಲ್ಲವರ ಕರ್ತವ್ಯ ಆಗಿರಕು. ನಮ್ಮ ಸಂಸ್ಕೃತಿ ಬರೇ ಹಣಲಿ ಉಳಿಯದುಲೆ, ಬೆಳೆಯದುಲೆ. ಅದು ನಮ್ಮ ಜನಾಂಗದ ಪದ್ಧತಿಯಾಗಿರಕು. ನಮ್ಮ ಭಾಷೆನ, ಸಂಸ್ಕೃತಿನ ನಮ್ಮ ನಿತ್ಯದ ಜೀವನಲಿ ಬಳ್‌ಸಿರೆ ಮಾತ್ರ ಇವು ಉಳಯಕೆ ಸಾಧ್ಯವುಟ್ಟು.

ನಮ್ಮ ಸಂಸ್ಕೃತಿಯ ಅರ್ಥನೇ ನಮ್ಮ ಜನ ಮರ್‌ತ್ ಬುಟ್ಟೊಳೊ. ಇದ್‌ಕ್ಕೆ ಉದಾಹರಣೆ ಮದುವೆಲಿ ಹೈದಂಗೆ ಹಾಕುವ ಬಟ್ಟೆ. ಈಗಿನ ಕಾಲಲ್ಲಿ ಹೈದಂಗಳಿಗೆ ಮದುವೇಲಿ ಕೋಟು ಪಂಚೆ ಹಾಕಿಕೇ ನಾಚಿಕೆ ಆದೆ. ಅದೇ ಇತರ ಜಾತಿಯವು ಆದರೆ ಅವರ ಸಂಪ್ರದಾಯ ಬುಟ್ ಬುಡ್‌ದ್ಲೆ.

ನಮ್ಮ ಗೌಡ ಜನಾಂಗ ಮುಂದೆ ಬರಕ್ಕು. ಅರೆಭಾಷೆ ಪ್ರಸಿದ್ಧಿ ಪಡಿಯೋಕುತೇಳಿ ಈಗ "ಕೊಡಗು ಸಂಗಾತಿ" ಪುಸ್ತಕ ಪ್ರಚಾರ ಮಾಡ್ತಾಉಟ್ಟು ಇದರ್ನ ನಮ್ಮ ಹೈದಂಗ, ಗೂಡೆಗ ಓದಿ ನಮ್ಮ ಸಂಸ್ಕೃತಿನ ಬೆಳ್‌ಸಕು. ಅರೆಭಾಷೆಲೇ ಮಾತಾಡಕು. ನಾವೆಲ್ಲ ಕೂಡಿ ಬಾಳೋಕು.

ಗೌಡ ಸಂಸ್ಕೃತಿನ ಉಳಿಸಿ ಬೆಳೆಸುವಲ್ಲಿ ಅಡಿಪಾಯ ಹಾಕಿದ "ಕೊಡಗು ಸಂಗಾತಿ" ಗೌಡರುಗಳ ಮನೆ, ಮನೆಗಳಲ್ಲಿ ನಂದಾದೀಪಾಗಿ ಬೆಳಗಲಿ.

● **ಕಡ್ಲೇರ ಸುಮ ಮಂದಪ್ಪ,** ಕುಯ್ಯಂಗೇರಿ.

## ಇಂದಾರ್ ನಿಮ್ಮ ಚಳಿ ಬುಟ್ಟಾತಾ

ಒಂದೂರ್‌ಲ್ಲಿ ಅಯ್ಯಪ್ಪ ಅಜ್ಜ ಮತ್ತೆ ಸಣ್ಣಕ್ಕ ಅಜ್ಜಿಂತೇಳಿ ಇದ್ದೊ. ಅಜ್ಜಿ ಇಟ್ಟೆ ಮೀನ್‌ನಂಗೆ. ಬಾರಿ ಚುರ್ಕು ಅಜ್ಜ ಮಾತ್ರ ಸ್ವಲ್ಪ ಲಾಚರ್. ಅಜ್ಜಂಗೆ ದಿನಕ್ಕೆ ಮೂರ್ ಕಟ್ಟ್ ಬೀಡಿ ಬುಟ್ರೆ ಮತ್ತೆ ಒಲೆ ಬುಡನೇ ಅಜ್ಜನ ಖಾಯಂ ಜಾಗ. ಯಾವ ಕೆಲ್ಸನೂ ಮಾಡಿಕಿಲೆ. ಚಳಿಂತೇಳಿ ಒಲೆ ಬುಡಲಿ ಕೂರ್ತಿತ್. ಒಂದು ದಿನ ಅಜ್ಜಿ ಕೆಲ್ಸಮಾಡಿ ತುಂಬಾ ಸಾಕಾಗಿತ್ತ್. ಅಜ್ಜಿ ಬಂದ್ ಬುಟ್ಟ್ ಅಜ್ಜಂಗೆ ಹೇಳ್ತ್, ಹಟ್ಟಿಗೆ ಹೋಗಿ ದನ ಕೂಡಿ ಬನ್ನಿಂತ. ಆಗ ಅಜ್ಜ ಚಳಿನೆ ನೀನ್ ಹೋಗಿ ದನ ಕೂಡಿ ಬಾತೇಳ್ತ್. ಅಜ್ಜಿ ಹೋಗಿ ದನ ಕೂಡಿ ಬಂದ್ ಪುನಃ ಅಜ್ಜಂಗೆ ಹೇಳ್ತ್. ಹೋಗಿ ಸ್ವಲ್ಪ ಸೌದೆ ತನ್ನಿಂತ. ಆಗ ಅಜ್ಜ ಪುನಃ ನಂಗೆ ಚಳೀನೆ ಅಂತೇಳ್ತ್ ಹೀಂಗೆ ಸ್ವಲ್ಪ ದಿನ ಕಳ್ಯಕಾಕನ ಅಯ್ಯಪ್ಪಜ್ಜ ಸತ್ತೋತು. ಊರವು, ಮನೆವು, ನೆಂಟ್ರ್ ಎಲ್ಲ ಬಂದ್ ಬಾಯಿಗೆ ನೀರ್ ಕೊಟ್ಟು ಅಜ್ಜನ ಹೊತ್ತ್‌ಕಂಡ್ ಹೋಗಿ ಸುಡ್ಕ್‌ಳಿಗೆ ಕಾಟದ ಮೇಲೆ ಇಟ್ಟ್ ಕಿಚ್ಚಿ ಕೊಟ್ಟೊ. ಕಿಚ್ಚಿ ಹೊತ್ತಿಕಾಕನ ಅಜ್ಜಿ ಮರ್ಟ್ ಕಂಡ್ ಇಷ್ಟ್ ದಿನ ಚಳಿ ಚಳಿಂತೇಳಿ ಒಲೆ ಬುಡಲಿ ಕೂರ್ತಿದ್ದರಲ್ಲಾ ಇಂದಾರ್ ನಿಮ್ಮ ಚಳಿ ಬುಟ್ಟ್ಟತಾ ಅಂತ ಹೇಳಿ ಬೊಬ್ಬೆ ಹಾಕ್ತ್.

● **ಹೊಸೂರು ಆರ್. ನಿರಂಜನ,** ಭಾಗಮಂಡಲ.

## ಹಂಬಾಕ್ ಹಾಡು

ನಾನ್ಯಾರಿಗೆ ಕಡೆನೆ ?
ನನ್ನ ತಲೆ ನೋಡ್‌ನೆ...
ಕುಟ್ಟೆಕ್ಕಾಗಿ ಇಟ್ಟ ಕರಿಕಾಯಿನೆ !
ನಾನ್ಯಾರಿಗೆ ಕಡೆನೆ ?
ನನ್ನ ಕಣ್ಣ್ ನೋಡುನೆ ..
ಮಿಣಿ ಮಿಣಿ ಮಿಂಚ್ವ ಮಿಣಮುಳಿನೆ !
ನಾನ್ಯಾರಿಗೆ ಕಡೆನೆ ?
ನನ್ನ ಮೀಸೆ ನೋಡುನೆ...
ಹುಲಿ ಮೀಸೆ ಇಟ್ಟ ಹುಲಿರಾಯನೆ !
ನಾನ್ಯಾರಿಗೆ ಕಡೆನೆ ?
ನನ್ನ ಹೊಟ್ಟೆ ನೋಡುನೆ...
ಮಟ್ಟ ತುಂಬಿದ ಕನ್ನಂಬಾಡಿ ಕಟ್ಟೆನೆ !

● **ಪೂಜಾರಿ ಮೊಣ್ಣಪ್ಪ,** ಬೆಂಗಳೂರು.

# ಓದುಗರ ಮತ್ತು ಬರವಣಿಗೆಗಾರರ ಗಮನಕ್ಕೆ

**ಪ್ರಿಯ ಓದುಗರೇ :**

ನಿಮ್ಮಿಂದ ಹಲವಾರು ಬರಹಗಳು ಬರುತ್ತಿವೆ. ಇದು ನಮಗೂ ತುಂಬ ಸಂತೋಷದ ವಿಷಯ. ಕೆಲವರು ಪತ್ರದಲ್ಲಿ ಕಳಿಸಿದ ಕವನ, ಚುಟುಕು ಲೇಖನಗಳು ಪ್ರಕಟವಾಗಿದೆ. ಕೆಲವು ಪ್ರಕಟವಾಗದೆ ಇರಬಹುದು.

ನೀವು ಬರೆದು ಕಳಿಸಿದ ಬರಹವು ಪ್ರಕಟವಾಗಬೇಕೆಂಬ ಆಸೆ ನಿಮಗಿದ್ದರೆ ಅದು ಸರಿ. ನಿಮ್ಮ ಹಾಗೆಯೇ ಪ್ರತಿಯೊಬ್ಬರೂ ಯೋಚಿಸುತ್ತಾರಲ್ಲವೆ ? ನೀವೆಲ್ಲರೂ ಬರೆದು ಕಳಿಸಿದ ಬರಹಗಳು ನಮಗೆ ತಲುಪುತ್ತಿವೆ. ನೀವು ಎಷ್ಟೊಂದು ಆಸಕ್ತಿಯಿಂದ ಬರೆಯುತ್ತಿರೆಂದು ತಿಳಿದು ಖುಷಿಯಾಗುತ್ತದೆ. ಆದರೆ ಅದೇ ಹೊತ್ತಿಗೆ ಇದೆಲ್ಲವನ್ನು ಪತ್ರಿಕೆಯಲ್ಲಿ ಪ್ರಕಟಿಸಲು ಸಾಧ್ಯವಾಗುವುದಿಲ್ಲವೆಂದು ದುಃಖವೂ ಆಗುತ್ತದೆ. ಬಂದಿರುವ ಬರಹಗಳಲ್ಲಿ ಚೆನ್ನಾಗಿರುವ ಕೆಲವನ್ನು ಆರಿಸಿ ಪ್ರಕಟಿಸುತ್ತೇವೆ. ನೀವು ಬರೆದ ಕವನ ಪ್ರಾಸಬದ್ಧವಾಗಿ ಮೆಲುಕು ಹಾಕುವಂತಿದ್ದರೆ, ನಿಮ್ಮ ರಚನೆಯಾಗಿದ್ದರೆ, ಬೇರೆಲ್ಲೂ ಪ್ರಕಟವಾಗಿರದಿದ್ದರೆ ಖಂಡಿತ ಪ್ರಕಟವಾಗುತ್ತದೆಂದು ತಿಳಿಯಿರಿ.

ನಿಮ್ಮ ಬರಹವನ್ನು ಆರಿಸಿದ್ದರೂ ಸಹ ಕೆಲವೊಮ್ಮೆ ತಕ್ಷಣ ಪ್ರಕಟ ಮಾಡಲು ಸಾಧ್ಯವಾಗದು. ಏನು ಯೋಚಿಸಬೇಡಿ. ನಮಗೆ ಕಾಲಾವಕಾಶ ಕೊಡಿ.

ಇನ್ನೊಂದು ಸಂಗತಿ ಎಂದರೆ ಕೆಲವರು ಬೇರೆ ಪತ್ರಿಕೆಯಲ್ಲಿ ಬಂದ ಪದ್ಯ/ಕವನ/ಚುಟುಕ/ಗಾದೆ/ಲೇಖನಗಳನ್ನು ಹಾಗೆಯೇ ಬರೆದು ಕಳುಹಿಸಿದ್ದು ನಮ್ಮ ಗಮನಕ್ಕೆ ಬಂದಿದೆ. ಇನ್ನು ಕೆಲವರು ಒಂದೊಂದು ಗೆರೆ ಮಾತ್ರ ಬದಲಾಯಿಸಿ ತಮ್ಮ ಹೆಸರು ಹಾಕಿ ಕಳಿಸಿದ್ದಾರೆ. ಈ ರೀತಿಯ ಬರಹಗಳನ್ನು ಪ್ರಕಟಿಸುವುದು ಸಾಧ್ಯವೇ ಇಲ್ಲವೆಂದು ತಿಳಿಸುತ್ತೇವೆ.

ಸರಿಯೋ ತಪ್ಪೋ, ಹೇಗೊ ಇರಲಿ ನೀವೇ ಬರೆಯಿರಿ. ಬೇರೆ ಬೇರೆ ವಿಷಯಗಳ ಬಗ್ಗೆ ಬರೆದು ಕಳಿಸಿರಿ. ಬರೆಯುತ್ತಾ ಬರವಣಿಗೆಯನ್ನು ಅಭ್ಯಾಸ ಮಾಡಿಕೊಳ್ಳುವುದು ನಿಮ್ಮಿಂದ ಸಾಧ್ಯವಿದೆ. ನಿಮ್ಮ ಹೊಸ ಬರಹಗಳಿದ್ದರೆ ಕಳಿಸಿಕೊಡಿ. ಚೆನ್ನಾಗಿದ್ದರೆ ಖಂಡಿತ ಪ್ರಕಟಿಸುತ್ತೇವೆ.

**—ಸಂಪಾದಕಿ**

K.R.N.N. 240

# ಸಮಾಜ ಬಾಂಧವರೇ ಹಾಗೂ ನಾಗರಿಕರೇ

ಈ ಪತ್ರಿಕೆಯು
ನಿರಂತರವಾಗಿ ಹೊರ
ಹೊಮ್ಮಿ ಬರಬೇಕಾದರೆ, ಎಲ್ಲಾ
ಸಮಾಜ ಬಾಂಧವರ, ನಾಗರಿಕರ
ಸಹಕಾರ ಬಹಳ ಮುಖ್ಯವಾದುದು.
ಅದಿಲ್ಲದೇ ಹೋದಲ್ಲಿ ಮನೆ ಮನಗಳನ್ನು
ಗೆದ್ದಂತಹ ಈ ಪತ್ರಿಕೆ ಮತ್ತೆ ನಿಮ್ಮ ಮನೆ
ಬಾಗಿಲನ್ನು ತಟ್ಟಲು ಅಸಾಧ್ಯವಾದೀತು.
ಆದುದರಿಂದ ಸಹೃದಯ ಓದುಗರು, ಚಂದಾ
ದಾರರಾಗಿಯೋ, ಶುಭಾಶಯವನ್ನು ಕೋರಿಯೋ
ಜಾಹೀರಾತನ್ನು ನೀಡಿಯೋ ಸಹಕರಿಸಬೇಕೆಂದು ಈ
ಮೂಲಕ ಕೇಳಿಕೊಳ್ಳುತ್ತೇವೆ.

—"ಸಂಗಾತಿ ಬಳಗ"

---

| ಚಂದಾ ವಿವರ | | ಜಾಹೀರಾತು | |
|---|---|---|---|
| ಅರೆವಾರ್ಷಿಕ | 60/- | ರಕ್ಷಾಪುಟ ಕೊನೆ | 1500/- |
| ವಾರ್ಷಿಕ | 120/- | ರಕ್ಷಾಪುಟ ಒಳ | 1000/- |
| ಅಜೀವ ಸದಸ್ಯತ್ವ | 1000/- | 1/2 ಪುಟಕ್ಕೆ | 500/- |
| ಹಿತೈಷಿಗಳಾಗಿ | 2500/- | 1/4 ಪುಟಕ್ಕೆ | 250 |
| ಮಹಾಪೋಷಕರಾಗಿ | 5000/- | | |

Printed by M K Thammaiah and Published by Kodagu Sangathi on behalf of Pattada P. Sheelamani and Printed at ASHIRWAD PRINTERS, 180/A, 6th Main, Vinayakanagar, Mysore-12
Published at Mysore, Editor PATTADA. P. SHEELAMANI, 322, Bhogadi Circle, Hinkal Post, Mysore-570017 Phone ; 516771